CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೬, ೨೦೦೪ (ಭಾದ್ರಪದ ೨೫, ಶಕ ವರ್ಷ ೧೯೨೬) | ಸಂಚಿಕೆ ೩೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಶಿಕ್ಷಣ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ ಮಲ್ಲಸಂದ್ರದ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ 1993-94 ರಿಂದ 1998-99ರ ವರೆಗೆ ಮಾನ್ಯತೆ ಆಗದೆ ಇದ್ದ ಅವಧಿಯಲ್ಲಿ ಅನುದಾನ ನೀಡಿದ; ಮತ್ತು 1995-2001ರ ಅವಧಿಯಲ್ಲಿ ಅನುದಾನ ರಹಿತ ವಿಭಾಗಗಳ ಶಿಕ್ಷಕರಿಗೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡಿ ವಂಚಿಸಿದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ/ ಕ್ರಿಮಿನಲ್ ಕ್ರಮ ಕಾಯ್ದಿರಿಸಿ ಅಮಾನತ್ತಾದ ಕೆಲವು ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 13.07.2004ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 9 ಡಿಜಿಡಿ 2003.
2. ದಿನಾಂಕ: 23.07.2004ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 9 ಡಿಜಿಡಿ 2003.
3. ದಿನಾಂಕ: 09.08.2004ರ ಕ್ರಮ ಸಂಖ್ಯೆ: ಸಿ2 (5) ದೂರು:54:2004-05.

**ಪ್ರಸ್ತಾವನೆ:**

ಮೇಲೆ 2ರಲ್ಲಿ ಓದಲಾದ ದಿನಾಂಕ: 23.07.2004ರ ಸರ್ಕಾರಿ ಆದೇಶದೊಡನೆ ಓದಿಕೊಂಡಂತೆ, ಮೇಲೆ 1ರಲ್ಲಿ ಓದಲಾದ ದಿನಾಂಕ: 13.07.2004ರ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ಶಿಸ್ತು ಕ್ರಮ/ ಕ್ರಿಮಿನಲ್ ಕ್ರಮ ಬಾಕಿ ಇರಿಸಿ ಅಮಾನತ್ತಿನಲ್ಲಿರಿಸಲಾಯಿತು:

1. ಶ್ರೀ ಪ್ರಭಾಕರ್, ಶಿಕ್ಷಣಾಧಿಕಾರಿ (ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ)
2. ಶ್ರೀ ಟಿ.ಸಿ. ಚಂದ್ರಯ್ಯ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರು.
3. ಶ್ರೀಮತಿ ಬಿ.ಆರ್. ಶೈಲಕುಮಾರಿ, ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು.
4. ಶ್ರೀ ಬಿ. ರಾಮಾಂಜಯ್ಯ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕೂಡಿಗೆ, ಕೊಡಗು ಜಿಲ್ಲೆ.
5. ಶ್ರೀ ಬಿ.ಸಿ. ವಸಂತಕುಮಾರ್, ಕ್ಷೇತ್ರ ಶಿಕ್ಷಣಾಧಿಕಾರಿ, ತುಮಕೂರು.
6. ಶ್ರೀ ಸಯ್ಯದ್ ಖಲಂದರ್, ಕ್ಷೇತ್ರ ಶಿಕ್ಷಣಾಧಿಕಾರಿ, ಬೆಂಗಳೂರು ಉತ್ತರ ವಲಯ-02, ಬೆಂಗಳೂರು.
7. ಶ್ರೀ ಹೆಚ್.ಡಿ. ಗೋವಿಂದಯ್ಯ, ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು-3.

ಮೇಲೆ 3ರಲ್ಲಿ ಓದಲಾದ ದಿನಾಂಕ: 09.08.2004ರ ಅರೆ ಸರ್ಕಾರಿ ಪತ್ರದಲ್ಲಿ ಸಾರ್ವಜನಿಕ ಶಿಕ್ಷಣ ಆಯುಕ್ತರು ಅದೇ ದಿನಾಂಕದಂದು ಅದೇ ಕ್ರಮ ಸಂಖ್ಯೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇವರಿಗೆ ಬರೆದ ಅರೆ ಸರ್ಕಾರಿ ಪತ್ರದ ಪ್ರತಿಯನ್ನು, ಮುಖ್ಯಮಂತ್ರಿಯವರ ಅಪರ ಕಾರ್ಯದರ್ಶಿಯವರಿಗೆ ಕಳುಹಿಸಿಕೊಟ್ಟಿದ್ದಾರೆ. ಸದರಿ ಪತ್ರದಲ್ಲಿ ಆಯುಕ್ತರು ಇತರ ಅಂಶಗಳ ಜೊತೆಗೆ, ಕೆಳಕಂಡ ಅಭಿಪ್ರಾಯವನ್ನು ಕೊಟ್ಟಿದ್ದಾರೆ.

"(ii) ಈ ಬಗ್ಗೆ ಮುಖ್ಯವಾಗಿ ಆಗಿನ ತುಮಕೂರು ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸಿದ ಶ್ರೀ ಪ್ರಭಾಕರ್, ಇವರ ಕಾರ್ಯನಿಷ್ಠೆಯ ಬಗ್ಗೆ ಕೆಲವು ಸಂದೇಹಗಳು ಉದ್ಭವವಾಗುತ್ತವೆ.

(ಎ) ಮೇಲೆ ಈಗಾಗಲೇ ತಿಳಿಸಿರುವಂತೆ ಇಂತಹ ಅನುಮೋದನಾ ಆದೇಶಗಳಿಗೆ ಸಂಬಂಧಪಟ್ಟ ಉಪನಿರ್ದೇಶಕರುಗಳೇ ಖುದ್ದಾಗಿ ರುಜು ಹಾಕತಕ್ಕದ್ದಿದೆ. ಅಂತಹ ರುಜುವನ್ನು ಹೊಂದದೇ ಬಂದ ಈ ಆದೇಶವು ಅಧಿಕೃತವೇ ಎಂಬ ಬಗ್ಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಉಪನಿರ್ದೇಶಕರನ್ನು ಸಂಪರ್ಕಿಸಿ ಖಚಿತಪಡಿಸಿಕೊಳ್ಳತಕ್ಕದ್ದಿತ್ತು. ಅವರು ಹಾಗೆ ಮಾಡಿಲ್ಲ.

(ಬಿ) ಅನುಮೋದಿತ ಶಿಕ್ಷಕರುಗಳ ನೇಮಕಾತಿಯು ಮರಣ/ ನಿವೃತ್ತಿ/ ರಾಜಿನಾಮೆ ಮತ್ತು ಮುಂಬಡ್ತಿಯಿಂದ ಉದ್ಭವವಾದ ರಿಕ್ತ ಸ್ಥಾನಗಳಿಗೆ ಮಾತ್ರವೇ ಆಗಿದೆ ಎಂದು ಉಪನಿರ್ದೇಶಕರ ಆದೇಶದಲ್ಲಿ ಉಲ್ಲೇಖಿಸಲಾಗಿದೆ. ಆದ್ದರಿಂದ ಈ ಶಾಲೆಯ ಯಾವ ಯಾವ ಶಿಕ್ಷಕರ "ಮರಣ, ನಿವೃತ್ತಿ, ರಾಜೀನಾಮೆ ಮತ್ತು ಮುಂಬಡ್ತಿ" ಗಳಿಂದ ಉದ್ಭವಿಸಿದ ಖಾಲಿ ಹುದ್ದೆಗಳಿಗೆ ಈ ವಿವಾದಿತ ನಾಲ್ಕು ಶಿಕ್ಷಕರ ನೇಮಕಾತಿ ಆಗಿದೆ ಎಂಬುದನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಪರಿಶೀಲಿಸತಕ್ಕದ್ದಿತ್ತು. ಅವರು ಹಾಗೆ ಮಾಡಿಲ್ಲ.

(ಸಿ) ಸದರಿ ನೇಮಕಾತಿಗಳು ಕ್ಷೇತ್ರ ಶಿಕ್ಷಣಾಧಿಕಾರಿಗಳ ಪ್ರಸ್ತಾವನೆಯ ಪ್ರಕಾರವೇ ಮಾಡಲಾಗಿದೆ ಎಂಬ ನಮೂದು ಉಪನಿರ್ದೇಶಕರ ಆದೇಶದಲ್ಲಿದೆ; ಆದ್ದರಿಂದ ಸದರಿ ಆದೇಶವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ತಮ್ಮ ಕಛೇರಿಯ ಸಂಬಂಧಪಟ್ಟ ಪ್ರಸ್ತಾವನೆಯ ಕಡತಕ್ಕೆ ಸೇರಿಸಿ ಮುಂದಿನ ಕ್ರಮ ಕೈಗೊಳ್ಳುವುದಿತ್ತು. ಈಗ ಹೇಳುವಂತೆ ಈ ಬಗ್ಗೆ ಯಾವ ಪ್ರಸ್ತಾವನೆಯೂ ಅವರ ಕಛೇರಿಯಿಂದ ಉಪನಿರ್ದೇಶಕರಿಗೆ ಹೋಗಿಲ್ಲ. ಆಗಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿವಾದಿತ ಉಪನಿರ್ದೇಶಕರ ಆದೇಶವನ್ನು ಅನುಷ್ಠಾನಗೊಳಿಸುವ ಪೂರ್ವದಲ್ಲಿ ಈ ಸರಳ ಮತ್ತು ಕಛೇರಿಯ ನಿರ್ವಹಣಾ ವಿಧಾನ (Office Procedure) ಪ್ರಕಾರ ಅವಶ್ಯಕವಿರುವ ಪರಿಶೀಲನೆ ಮಾಡಿದ್ದೇ ಆಗಿದ್ದರೆ ಈ ಹಗರಣಕ್ಕೆ ಆಸ್ಪದವೇ ಉಂಟಾಗುತ್ತಿರಲಿಲ್ಲ. ಆಗಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಪ್ರಭಾಕರ್, ಇವರು (ಕರ್ತವ್ಯದ ಅವಧಿ 19.06.95 ರಿಂದ 13.07.97) ಈ ಜವಾಬ್ದಾರಿ ನಿರ್ವಹಿಸುವಲ್ಲಿ ವಿಫಲರಾಗಿರುವುದು ಸ್ಪಷ್ಟವಾಗಿದೆ.

(iii) ..........ಈ ಪ್ರಕರಣದ ಸನ್ನಿವೇಶದಲ್ಲಿ ಈ ನಿಯಮಬಾಹಿರ ಅನುದಾನ ಬಿಡುಗಡೆಯ ಸಂಪೂರ್ಣ ಜವಾಬ್ದಾರಿ ಆಗಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಪ್ರಭಾಕರ್ ಇವರದ್ದೇ ಎಂದು ನನ್ನ ಅನಿಸಿಕೆ."

ಮೇಲೆ ಹೇಳಿದ ಆಯುಕ್ತರ ವರದಿಯ ಪ್ರಕಾರ ಶ್ರೀ ಪ್ರಭಾಕರ್ ಅವರ ನಂತರ ತುಮಕೂರು ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಹೋದ ಅಧಿಕಾರಿಗಳು ಶ್ರೀ ಪ್ರಭಾಕರ್ ಅವರು ಎಸಗಿದ್ದ ಅಕ್ರಮವನ್ನು ಮುಂದುವರೆಸಿದ್ದಾರೆ. ಅವರುಗಳಿಗೆ ಈ ಪ್ರಕರಣದ ನಿಯಮ ಬಾಹಿರತೆಯ ಮಾಹಿತಿ ಇತ್ತೋ ಅಥವಾ ಇಲ್ಲವೋ ಎಂಬ ಬಗ್ಗೆ ಸ್ಪಷ್ಟ ಮಾಹಿತಿ ಇಲ್ಲವೆಂದೂ ಸಹ ಆಯುಕ್ತರು ತಿಳಿಸಿದ್ದಾರೆ.

ಮೇಲ್ಕಂಡ ಸಂದರ್ಭಗಳಲ್ಲಿ ಶ್ರೀ ಪ್ರಭಾಕರ್ ಅವರನ್ನು ಬಿಟ್ಟು, ಉಳಿದ 6 ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ; ಮತ್ತು ಅಮಾನತ್ತು ತೆರವಾದವರನ್ನು ತುಮಕೂರು ಜಿಲ್ಲೆಯಲ್ಲಿ ಪುನರ್ ನೇಮಿಸದೆ ಇರುವ ಬಗ್ಗೆ ಸರ್ಕಾರ ಪರಿಶೀಲಿಸಿದೆ.

ಹಾಗೆಯೇ ಕ್ರಿಮಿನಲ್ ನಡವಳಿಗಳ ಪ್ರಾರಂಭದ ಬಗ್ಗೆಯೂ ಸರ್ಕಾರ ಪುನರ್ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 9 ಡಿಜಿಡಿ 2003, ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2004**

ಮೇಲ್ಕಂಡ ಸಂದರ್ಭಗಳಲ್ಲಿ ಶಿಸ್ತು ಕ್ರಮ/ ಕ್ರಿಮಿನಲ್ ಕ್ರಮ ಬಾಕಿ ಇರಿಸಿ, ಕೆಳಕಂಡ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ, ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ ಅವರ ಹೆಸರಿನ ಎದುರಿಗೆ ತೋರಿಸುವ ಹುದ್ದೆಗಳಿಗೆ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ:

| ಕ್ರಮ ಸಂ. | ಅಧಿಕಾರಿಯ ಹೆಸರು ಮತ್ತು ಅಮಾನತ್ತಾದಾಗ ಹೊಂದಿದ್ದ ಹುದ್ದೆ | ಅಮಾನತ್ತು ತೆರವುಗೊಳಿಸಿದ ನಂತರ ನೇಮಕ ಮಾಡಿರುವ ಹುದ್ದೆ |
|---|---|---|
| 1. | ಶ್ರೀ ಟಿ.ಸಿ. ಚಂದ್ರಯ್ಯ, ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರಜಿಲ್ಲೆ, ಬೆಂಗಳೂರು. | ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರಜಿಲ್ಲೆ, ಬೆಂಗಳೂರು. |
| 2. | ಶ್ರೀಮತಿ ಬಿ.ಆರ್. ಶೈಲಕುಮಾರಿ, ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು. | ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು. |
| 3. | ಶ್ರೀ ಬಿ. ರಾಮಾಂಜಯ್ಯ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕೂಡಿಗೆ, ಕೊಡಗು ಜಿಲ್ಲೆ. | ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕೂಡಿಗೆ, ಕೊಡಗು ಜಿಲ್ಲೆ. |
| 4. | ಶ್ರೀ ಬಿ.ಸಿ. ವಸಂತಕುಮಾರ್, ಕ್ಷೇತ್ರ ಶಿಕ್ಷಣಾಧಿಕಾರಿ, ತುಮಕೂರು. | ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕೋಲಾರ. |
| 5. | ಶ್ರೀ ಸಯ್ಯದ್ ಖಲಂದರ್, ಕ್ಷೇತ್ರ ಶಿಕ್ಷಣಾಧಿಕಾರಿ, ಬೆಂಗಳೂರು ಉತ್ತರ ವಲಯ-2, ಬೆಂಗಳೂರು. | ಕಾರ್ಯಕ್ರಮಾಧಿಕಾರಿ, ರಾಜ್ಯ ಯೋಜನಾ ನಿರ್ದೇಶಕರ ಕಛೇರಿ, ಸರ್ವಶಿಕ್ಷಣ ಅಭಿಯಾನ, ಬೆಂಗಳೂರು, (ಇವರ lien ಅನ್ನು ದಿನಾಂಕ: 13.08.2004ರ ಸರ್ಕಾರಿ ಅಧಿಸೂಚನೆ ಇಡಿ 351 ಡಿಪಿಐ 2004ರ ಪ್ರಕಾರ ಈ ಹುದ್ದೆಗೆ ವರ್ಗಾಯಿಸಲಾಗಿತ್ತು) |
| 6. | ಶ್ರೀ ಹೆಚ್.ಡಿ. ಗೋವಿಂದಯ್ಯ, ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು-3. | ಅಮಾನತ್ತಿಗೆ ಸಂಬಂಧಿಸಿದಂತೆ ಇವರು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದಿದ್ದಾರೆ ಎಂದು ತಿಳಿದು ಬಂದಿದೆ. |

2. ಅಮಾನತ್ತು ತೆರವುಗೊಳಿಸಲ್ಪಟ್ಟು ಸೇವೆಯಲ್ಲಿ ಪುನರ್ ನೇಮಕಗೊಂಡ ಅಧಿಕಾರಿಗಳು, ಅವರನ್ನು ನೇಮಿಸಲ್ಪಟ್ಟಿರುವ ಹುದ್ದೆಗಳಿಗೆ ಕೂಡಲೇ ಹಾಜರಾಗತಕ್ಕದ್ದು ಮತ್ತು ಕಾರ್ಯವರದಿ ಮಾಡಿಕೊಂಡ ಬಗ್ಗೆ ವರದಿಯನ್ನು ನೇರವಾಗಿ ಸರ್ಕಾರಕ್ಕೂ ಸಹ ಕಳುಹಿಸಿಕೊಡತಕ್ಕದ್ದು. ಪುನರ್ ನೇಮಕ ಮಾಡಿದ ಸ್ಥಳದಲ್ಲಿ, ಈ ಆದೇಶದ ದಿನಾಂಕದಿಂದ 10 ದಿನಗಳ ಒಳಗೆ, ಸಂಬಂಧಪಟ್ಟವರು ಕರ್ತವ್ಯಕ್ಕೆ ಹಾಜರಾಗದೆ ಇದ್ದಲ್ಲಿ, ಅವರು ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದ ಸಂಸ್ಥೆಗಳ ಮುಖ್ಯಸ್ಥರು ಅಂತಹ ವಾಸ್ತವಾಂಶವನ್ನು ಸರ್ಕಾರಕ್ಕೆ ನೇರವಾಗಿ ಸದರಿ 10 ದಿನಗಳ ಅವಧಿ ಮುಗಿದ ಕೂಡಲೇ ವರದಿ ಮಾಡತಕ್ಕದ್ದು.

3. ಲೋಕಾಯುಕ್ತರ ತನಿಖಾ ವರದಿ ಬಂದ ನಂತರ, ಕ್ರಿಮಿನಲ್ ನಡವಳಿಗಳ ಪ್ರಾರಂಭದ ಬಗ್ಗೆ ನಿರ್ಣಯಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್.940

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1, 2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಯಲಬುರ್ಗಾ ತಾಲ್ಲೂಕು ಗುನ್ನಾಳ ಗ್ರಾಮದ ವಿವಿಧ ಕಾಮಗಾರಿಗಳಿಗೆ ಬರಪರಿಹಾರ ಯೋಜನೆಯಡಿ ನೀಡಿರುವ ಆಹಾರ ಧಾನ್ಯಗಳ ಅವ್ಯವಹಾರ- ಶ್ರೀ ನಾಟೇಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ್ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ ಇವರುಗಳನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ-ಆದೇಶ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಕೊಪ್ಪಳ ಇವರ ಪತ್ರ ಸಂಖ್ಯೆ: ಕಂದಾಯ/ ನೈವಿ/ 26/2004-05, ದಿನಾಂಕ:23.07.2004.

**ಆದೇಶ ಸಂಖ್ಯೆ: ಗ್ರಾಅಪ 32 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 27ನೇ ಆಗಸ್ಟ್, 2004**

**ಪ್ರಸ್ತಾವನೆ:**

ಯಲಬುರ್ಗಾ ತಾಲ್ಲೂಕು ಗುನ್ನಾಳ ಗ್ರಾಮದಲ್ಲಿಯ ರಾಯರೆಡ್ಡಿ ನಗರ ಕಾಲೋನಿಯಲ್ಲಿ ಅಕ್ಕಿ ಸಂಗ್ರಹಣೆ ಮತ್ತು ಸಾಗಾಣಿಕೆಯಲ್ಲಿನ ಅವ್ಯವಹಾರ/ ಕರ್ತವ್ಯಲೋಪವಾಗಿದೆ ಎಂಬ ಬಗ್ಗೆ ಯಲಬುರ್ಗಾ ಜಿಲ್ಲಾ ಪಂಚಾಯತಿ ಇಂಜಿನಿಯರಿಂಗ್ ಉಪ ವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಡಿ.ಸಿ. ನಾಟೇಕರ್ ಮತ್ತು ಸಹಾಯಕ ಇಂಜಿನಿಯರ್ ಆದ ಶ್ರೀ ಶಂಕರ ಮಳಗಿ, ಹಾಗೂ ಬಿಲ್ ಪಾಸ್ ಮಾಡುವಲ್ಲಿ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರುಗಳು ಮೇಲ್ನೋಟಕ್ಕೆ ಕಾರಣರೆಂದು ತಿಳಿಸುತ್ತಾ ಈ ಮೂರು ಅನುಷ್ಠಾನಾಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಪ್ರಾರಂಭಿಸುವಂತೆ ಹಾಗೂ ಸಹಾಯಕ ಕಾರ್ಯಪಾಲಕ ಮತ್ತು ಸಹಾಯಕ ಇಂಜಿನಿಯರ್‌ಗಳನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರಿಬ್ಬರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಜಿಲ್ಲಾಧಿಕಾರಿಗಳು ಕೊಪ್ಪಳ ಇವರು ಮೇಲೆ ಓದಲಾದ ದಿನಾಂಕ: 23.07.2004 ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿದ್ದು ಸದರಿ ವಿವರಗಳು ಈ ಕೆಳಕಂಡಂತೆ ಇವೆ.

ಯಲಬುರ್ಗಾ ತಾಲ್ಲೂಕಿನ ಹಿರೇವಂಕಲಕುಂಟ ಹೋಬಳಿಯಲ್ಲಿ 35 ಬರಪರಿಹಾರ ಕಾಮಗಾರಿಗಳನ್ನು ನಿರ್ವಹಿಸಲು ಸಹಾಯಕ ಇಂಜಿನಿಯರ್ ಆದ ಶ್ರೀ ಶಂಕರ ಮಳಗಿ, ಇವರಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಡಿ.ಸಿ. ನಾಟೇಕರ್, ಇವರು ವಹಿಸಿದ್ದು, ಇದಕ್ಕೆ ಸಂಬಂಧಿಸಿದ 1186.10 ಕ್ವಿಂಟಾಲ್ ಅಕ್ಕಿಯನ್ನು ನೀಡಿದ್ದು, ಈ ಪೈಕಿ ದಿನಾಂಕ: 15.06.2004 ರಿಂದ 05.07.2004ರ ವರೆಗೆ 1073.20 ಕ್ವಿಂಟಾಲ್ ಅಕ್ಕಿಯನ್ನು ಎತ್ತುವಳಿ ಮಾಡಿದ್ದು, ಹೀಗೆ ಎತ್ತುವಳಿ ಮಾಡಿರುವ ಅಕ್ಕಿಯನ್ನು 590 ಕ್ವಿಂಟಾಲ್ ಅಕ್ಕಿ ಇಂಗು ಗುಂಡಿಗಳಿಗೆ, 482.50 ಕ್ವಿಂಟಾಲ್ ಅಕ್ಕಿ 3 ರಸ್ತೆ ಕಾಮಗಾರಿಗಳಿಗೆ ಸಂಬಂಧಿಸಿದ್ದು ತಮ್ಮ ರಸ್ತೆ ಕಾಮಗಾರಿಗಳಿಗೆ ನೀಡಿದ 482.50 ಕ್ವಿಂಟಾಲ್ ಅಕ್ಕಿ ಸಂಪೂರ್ಣವಾಗಿ ವಿತರಣೆ ಮಾಡಲಾಗಿದ್ದು 31 ಇಂಗು ಗುಂಡಿಗಳಿಗೆ 258.70 ಕ್ವಿಂಟಾಲ್ ಅಕ್ಕಿ ವಿತರಣೆ ಮಾಡಿ ಉಳಿದ ಅಕ್ಕಿಯನ್ನು ವಿತರಣೆ ಮಾಡಲು ಗುನ್ನಾಳ ಗ್ರಾಮದಲ್ಲಿ ಸಂಗ್ರಹಣೆ ಮಾಡಿರುತ್ತಾರೆ. ಇಂಗು ಗುಂಡಿಗಳ ನಿರ್ಮಾಣಕ್ಕೆ ಬೇಕಾದ ಕಲ್ಲಿನ ಕಡಿ ಮತ್ತು ಉಸುಕನ್ನು ಸಾಗಾಣಿಕೆ ಮಾಡಲು ಶ್ರೀ ಎಂಕಾರೆಡ್ಡಿ ಹಿರೆಬೆನಕಲ್ ಇವರಿಗೆ ಬಿಲ್ಲಿನಲ್ಲಿ ನಗದು ಹಣ ಮತ್ತು ಆಹಾರ ಧಾನ್ಯ ಮಂಜೂರಾತಿ ನೀಡಿದ್ದು, ಸದರಿಯವರು ವಿವಿಧ ಟ್ರಾಕ್ಟರ್ ಮಾಲಿಕರಿಗೆ ಬಾಡಿಗೆಯನ್ನು ಆಹಾರ ಧಾನ್ಯ ರೂಪದಲ್ಲಿ ಕೊಡಲು ಲಾರಿ ಮೂಲಕ ಧಾನ್ಯ ಸಾಗಿಸುವ ವ್ಯವಸ್ಥೆ ಮಾಡಿದ್ದು ಆ ಸಮಯದಲ್ಲಿ ಲಾರಿಯನ್ನು ವಶಪಡಿಸಿಕೊಂಡಿದ್ದು, ಇನ್ನುಳಿದಂತೆ ಇಂಗು ಗುಂಡಿ ಕಾಮಗಾರಿಯ ಕೂಲಿ ಆಳುಗಳಿಗೆ ನೀಡಬೇಕಾಗಿರುವ 183 ಕ್ವಿಂಟಾಲ್ ಧಾನ್ಯ ವಿತರಣೆಯಾಗದೆ ಗುನ್ನಾಲ ಗ್ರಾಮದಲ್ಲಿ ಉಳಿದಿರುತ್ತದೆ.

ಕಾಮಗಾರಿಯ ಸ್ಥಳಕ್ಕೆ ಸಾಮಗ್ರಿಗಳನ್ನು ಸಾಗಾಣಿಕೆ ಮಾಡುವ ವಾಹನಕ್ಕೆ ಬಾಡಿಗೆ ರೂಪದಲ್ಲಿ ಧಾನ್ಯವನ್ನು ಪಾವತಿಸುವುದು ನಿಯಮಬಾಹಿರವಾಗಿದ್ದು ಇದಕ್ಕೆ ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಶಾಖಾಧಿಕಾರಿಗಳು ಕಾರಣರಾಗಿರುತ್ತಾರೆ. ಕಲ್ಲಿನ ಕಡಿ ಉಸುಕು ಸಾಗಾಣಿಕೆ ಹೆಡ್ ಲೋಡ್ ಮುಖಾಂತರ ಸಾಗಾಣಿಕೆ ಮಾಡಲು ಕೂಲಿಕಾರರಿಗೆ ಹಂಚಿಕೆ ಮಾಡದೆ ಸಾಗಾಣಿಕೆ ಗುತ್ತಿಗೆದಾರರಿಗೆ ಹಂಚಿಕೆ ಮಾಡಿರುವುದು ನಿಯಮಬಾಹಿರವಾಗಿರುತ್ತದೆ.

ಒಂದು ತಿಂಗಳಿಗೂ ಮೇಲ್ಪಟ್ಟು ಅಕ್ಕಿಯು ಲಭ್ಯತೆ ಇದ್ದಾಗ್ಯೂ ಅಕ್ಕಿಯನ್ನು ವಿತರಣೆ ಮಾಡಿರುವುದಿಲ್ಲ. ಕೂಲಿಕಾರರು ಧಾನ್ಯದ ಬದಲಿಗೆ ನಗದು ಹಣ ನೀಡಲು ಕೋರಿದ ವಿವರಣೆ ಒಪ್ಪುವಂತದಲ್ಲ. ಈ ಲೋಪಕ್ಕೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಡಿ.ಸಿ. ನಾಟೇಕರ್ ಮತ್ತು ಸಹಾಯಕ ಇಂಜಿನಿಯರ್ ಆದ ಶ್ರೀ ಶಂಕರ ಮಳಗಿ, ಇವರುಗಳು ಕಾರಣರಾಗಿರುತ್ತಾರೆ.

50 ಕೆ.ಜಿ. ಧಾನ್ಯದ ಚೀಲಗಳನ್ನು 100 ಕೆ.ಜಿ. ಧಾನ್ಯದ ಚೀಲಗಳಿಗೆ ಬದಲಾವಣೆ ಮಾಡಿದ್ದು ಈ ಬಗ್ಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಸಹಾಯಕ ಇಂಜಿನಿಯರ್‌ಗಳು ನೀಡಿರುವ ಹೇಳಿಕೆ ಸಮಂಜಸವಲ್ಲ. ಈ ಸಾಗಾಣಿಕೆಯು ಅಂದರೆ ಧಾನ್ಯ ಬದಲಾಯಿಸಿ ಸಾಗಾಣಿಕೆ ಮಾಡಿರುವುದು ನಿಯಮಬಾಹಿರವಾಗಿರುತ್ತದೆ. ಮೇಲಿನಂತೆ ಹಣ ಪಾವತಿಸುವ ಪದ್ಧತಿ ಕ್ರಮಬದ್ಧವಾಗಿರುವುದಿಲ್ಲ.

ಜಿಲ್ಲಾಧಿಕಾರಿ, ಕೊಪ್ಪಳ ಇವರ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಶ್ರೀ ಡಿ.ಸಿ. ನಾಟೀಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾಪಂಚಾಯತಿ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ, ಇವರುಗಳು ಈ ಪ್ರಕರಣದಲ್ಲಿ ತೀವ್ರ ಕರ್ತವ್ಯಲೋಪ/ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಮತ್ತು ಸದರಿ ಆಪಾದನೆಗಳು ಇವರು ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂತಹವುಗಳಾಗಿರುವುದರಿಂದಲೂ;

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿಬಂದ ದಾಖಲೆ ದಸ್ತಾವೇಜುಗಳನ್ನು ಪರಿಶೀಲಿಸಲಾಗಿ ಶ್ರೀ ಡಿ.ಸಿ. ನಾಟೀಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾಪಂಚಾಯಿತಿ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗ, ಇವರುಗಳನ್ನು ಸೇವೆಯಿಂದ ಅಮಾನತ್ತಿನಲ್ಲಿಡುವುದು ಅಪೇಕ್ಷಣೆಯವೆಂದು ಕಂಡು ಬಂದಿರುವುದರಿಂದಲೂ;

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮ-1957ರ ನಿಯಮ 10ರ ನಿಯಮ 1 (ಡಿ) ಪ್ರಕಾರ ಸರ್ಕಾರವು ಶ್ರೀ ಡಿ.ಸಿ. ನಾಟೀಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾಪಂಚಾಯಿತಿ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ, ಇವರುಗಳನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಮೂಲಕ ಅಮಾನತ್ತಿನಲ್ಲಿಡಲು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಶ್ರೀ ಡಿ.ಸಿ. ನಾಟೀಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾಪಂಚಾಯತಿ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ, ಇವರುಗಳಿಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಡಿ.ಸಿ. ನಾಟೀಕರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶಂಕರ ಮಳಗಿ, ಸಹಾಯಕ ಇಂಜಿನಿಯರ್, ಜಿಲ್ಲಾಪಂಚಾಯತಿ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿ ಇಲ್ಲದೆ ಅವರ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್.941

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೃಷ್ಣಭಾಗ್ಯ ಜಲ ನಿಗಮ ನಿಯಮಿತವು 2001ನೇ ಸಾಲಿನಲ್ಲಿ ಎಲ್.ಐ.ಸಿ. ಯಿಂದ ಪಡೆದ ರೂ. 50.00 ಕೋಟಿಗಳ ಸಾಲವನ್ನು ಮರುಪಾವತಿಸಲು ಮತ್ತು ಸರ್ಕಾರದ ಖಾತರಿಯನ್ನು ವಿಸ್ತರಿಸಲು ಸಚಿವ ಸಂಪುಟದ ಅನುಮೋದನೆ ಪಡೆಯುವ ಕುರಿತು.

**ಓದಲಾಗಿದೆ:**
1. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ನೀಇ 25 ಡಬ್ಲ್ಯೂಬಿಎಂ 92 ದಿನಾಂಕ:06.05.1994.
2. ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ (ಕೆಬಿಜೆಎನ್‌ಎಲ್) ದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಬಿಜೆಎನ್‌ಎಲ್/ ಡಿಎಫ್/ ಎಜಿಎಂ (ಎಫ್)ಬಿ -22004-05/249 ದಿನಾಂಕ: 19/20.05.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶಾನುಸಾರ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ (ಕೆಬಿಜೆಎನ್‌ಎಲ್) ವನ್ನು ಕಂಪನಿ ಕಾಯ್ದೆ 1956ರ ಅಡಿಯಲ್ಲಿ ರಚಿಸಲಾಯಿತು. ನಿಗಮದ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕಾರ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು, ಕೃಷ್ಣಾ ನದಿ ನೀರಿನ ಹಂಚಿಕೆಗಾಗಿ ನೇಮಿಸಲಾದ ನ್ಯಾಯ ಮಂಡಳಿಯು ಕೃಷ್ಣಾ ಕೊಳ್ಳದಲ್ಲಿ ಕರ್ನಾಟಕ ರಾಜ್ಯಕ್ಕೆ ನಿಗದಿಪಡಿಸಿರುವ 734 ಟಿಎಂಸಿ ನೀರಿನ ಪ್ರಮಾಣದಲ್ಲಿ (ಬಚಾವತ್ ಅವಾರ್ಡ್‌ನಂತೆ) ಕೃಷ್ಣಾ ಮೇಲ್ದಂಡೆ ಯೋಜನೆಗೆ ನಿಗದಿಪಡಿಸಿರುವ 173 ಟಿಎಂಸಿ ನೀರಿನ ಪ್ರಮಾಣವನ್ನು ಉಪಯೋಗಿಸಿಕೊಂಡು ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವ ಜವಾಬ್ದಾರಿಯನ್ನು ಹೊಂದಿದೆ.

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ತನ್ನ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕಾರ, ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಾದ ಸಂಪನ್ಮೂಲವನ್ನು ಬಾಂಡ್ಸ್: ಡಿಬೆಂಚರ್ಸ್‌ಗಳನ್ನು ಬಿಡುಗಡೆ ಮಾಡುವುದರ ಮೂಲಕ ಕ್ರೋಢೀಕರಿಸುತ್ತದೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ಇಲ್ಲಿಯವರೆಗೆ ರೂ. 6259.25 ಕೋಟಿಗಳನ್ನು (1995-96ನೇ ಸಾಲಿನಿಂದ 2003-2004ನೇ ಸಾಲಿನ ಮಾರ್ಚ್ ಮಾಹೆಯವರೆಗೆ) ಈ ಕೆಳಕಂಡಂತೆ ಸಂಗ್ರಹಿಸಿರುತ್ತದೆ.

| Year | Series | Borrowing | Amount mobilized (Rs. in Crores) | Total Amount mobilized (Rs. in Crores) |
|---|---|---|---|---|
| 1 | 2 | 3 | 4 | 5 |
| 1995-96 | I | Private | 180.00 | 180.00 |
| 1996-97 | II | Public | 300.00 | |
| | II | Private | 25.15 | |
| | IV | Private | 184.33 | |
| | | Term loan | 57.82 | 567.30 |
| 1997-98 | V | Private | 403.98 | |
| | VI-A | Private | 108.74 | |
| | VI-B | Private | 296.86 | |
| | | Short term loan | 200.00 | 1009.58 |
| 1998-99 | VII-A | Private | 320.20 | |
| | VII-B | Private | 290.41 | |
| | | Hudco (R & R) | 36.00 | 646.61 |
| 1999-2000 | VIII-A | Private | 58.05 | |
| | VIII-B | Private | 312.17 | |
| | | Hudco (R & R) | 165.49 | 535.71 |
| 2000-2001 | VIII-C | Private | 507.70 | |
| | IX-A | Private | 297.36 | |
| | | Hudco | 141.20 | |
| | IX-A-I | Private | 50.00 | |
| | IX-A-II | Private | 25.00 | |
| | IX-A-III | Private | 230.42 | |
| | Bank of India | | 25.00 | |
| | DCB | | 25.00 | 1301.68 |
| 2001-2002 | X-A | Private | 105.58 | |
| | X-B | Private | 25.00 | |
| | C-C | Private | 174.22 | |
| | DCB | | 20.00 | |
| | Bank of India | | 50.00 | |
| | LIC | | 50.00 | |
| | ICICI | | 50.00 | |
| | Syndicate Bank | | 50.00 | |
| | BMRTL | | 26.18 | |
| | Indian Bank | | 25.00 | |
| | Hudco | | 40.00 | |
| | UBI | Private | 50.00 | |
| | Uco Bank | | 50.00 | |
| | X-D | | 122.75 | 838.73 |
| 2002-2003 | IX-B | Public | 350.17 | |
| | XI-A | Private | 50.00 | |
| | XI-B | Private | 51.73 | |
| | XI-C | Private | 85.95 | |
| | Uco Bank | | 50.00 | |
| | Central Bank | | 50.00 | |
| | Bank of India | | 50.00 | |
| | DCB | | 45.00 | |
| | UBI | | 50.00 | |
| | BMRTL | | 21.78 | 804.63 |
| | | | | **5884.24** |
| 2003-2004 | XII-B | Private | 110.50 | |
| | XII-C | | 165.00 | |
| | Uco Bank | Long Term | 50.00 | |
| | Dena Bank | | 50.00 | 375.50 |
| | | | | **6259.25** |

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ಕೃಷ್ಣಾ ಮೇಲ್ದಂಡೆ ಯೋಜನೆಗೆ 1995-96 ರಿಂದ 2003-2004ನೇ ಸಾಲಿನ ಮಾರ್ಚ್ ರವರೆಗೆ ಕ್ರೋಢೀಕರಿಸಿರುವ ಹಣದಲ್ಲಿ ಈ ಕೆಳಕಂಡಂತೆ ವೆಚ್ಚ ಮಾಡಿದ್ದು, ಇದರಲ್ಲಿ ಸರ್ಕಾರದ ವತಿಯಿಂದ ಮಾಡಿರುವ ವೆಚ್ಚವೂ ಸೇರಿರುತ್ತದೆ.

ರೂ. ಕೋಟಿಗಳಲ್ಲಿ

| ವಿವರಗಳು | 1995-1996 | 1996-1997 | 1997-1998 | 1998-1999 | 1999-2000 | 2000-2001 | 2001-2002 | 2002-2003 | 2003-2004 |
|---|---|---|---|---|---|---|---|---|---|
| ಸರ್ಕಾರ | 274.39 | 157.10 | 46.68 | 17.84 | - | - | - | - | - |
| ಕೆಬಿಜೆಎನ್‌ಎಲ್ (ನಿಗಮ) | 113.67 | 557.19 | 738.92 | 1068.36 | 1081.41 | 1494.17 | 1503.07 | 2205.82 | 2481.66 |
| **ಒಟ್ಟು** | **388.06** | **714.29** | **785.60** | **1086.20** | **1018.41** | **1494.17** | **1503.07** | **2205.82** | **2481.66** |

ಕೃಷ್ಣಾ ಭಾಗ್ಯ ಜಲ ನಿಗಮದ ವ್ಯವಸ್ಥಾಪಕ ನಿರ್ದೇಶಕರು ತಮ್ಮ ಪತ್ರ ಸಂಖ್ಯೆ: ಕೆಬಿಜೆಎನ್‌ಎಲ್/ ಡಿಎಫ್/ ಎಜಿಎಂ (ಎಫ್)ಬಿ -2/ 2004-05/249, ದಿನಾಂಕ: 19/20.05.2004ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಸ್ತಾಪಿಸುತ್ತಾ, ನಿಗಮವು ಹಿಂದೆ ಅಂದರೆ ಜೂನ್ 2002ರಲ್ಲಿ ಭಾರತೀಯ ಜೀವ ವಿಮಾ ನಿಗಮ (ಎಲ್.ಐ.ಸಿ)ದಿಂದ ರೂ. 50.00 ಕೋಟಿಗಳನ್ನು ಏಳು ವರ್ಷಗಳ ಅವಧಿಗೆ ಶೇ 12.60ರ ಬಡ್ಡಿ ದರದಂತೆ ಸಾಲ ಪಡೆದುಕೊಂಡಿತ್ತು. ಪ್ರಸ್ತುತದಲ್ಲಿ ವಿವಿಧ ಹಣಕಾಸು ಸಂಸ್ಥೆಗಳಿಂದ ಕಡಿಮೆ ಬಡ್ಡಿ ದರದಲ್ಲಿ (ಶೇ. 7.5 ರಿಂದ 7.75) ಸಾಲ ಸೌಲಭ್ಯ ದೊರಕಲಿದೆ, ಇಂತಹ ಸಾಲ ಸೌಲಭ್ಯದ ಸದಾವಕಾಶವನ್ನು ಉಪಯೋಗಿಸಿಕೊಂಡು ಈ ಹಿಂದೆ ಎಲ್.ಐ.ಸಿ. ಯಿಂದ ಪಡೆದಿದ್ದ ಹೆಚ್ಚಿನ ಬಡ್ಡಿ ದರದ ಸಾಲವನ್ನು ಮರುಪಾವತಿಸಬಹುದಾಗಿದೆ. ಈ ರೀತಿ ಮಾಡುವುದರಿಂದ ಸರ್ಕಾರಕ್ಕೆ ವಾರ್ಷಿಕವಾಗಿ ಸರಾಸರಿ ರೂ. 2.4 ಕೋಟಿ ಮತ್ತು ಸಾಲದ ಬಾಕಿ ಅವಧಿಯನ್ನು ಲೆಕ್ಕ ಹಾಕಿದಾಗ ರೂ. 9.70 ಕೋಟಿಗಳಷ್ಟು ಉಳಿತಾಯವಾಗುತ್ತದೆ. ಆದ್ದರಿಂದ ಕಡಿಮೆ ಬಡ್ಡಿ ದರದ ಹೊಸ ಸಾಲವನ್ನು ಪಡೆದು ಹೆಚ್ಚಿನ ಬಡ್ಡಿ ದರದ ಹಳೆ ಸಾಲವನ್ನು ಮರುಪಾವತಿಸುವ ಸಲುವಾಗಿ ಈಗ ನೀಡಿರುವ ಸರ್ಕಾರದ ಖಾತರಿಯನ್ನು ಮುಂದುವರಿಸುವ/ ವಿಸ್ತರಿಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 69 ಕೆಬಿಎನ್ 2004, ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2004**

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಈಗಾಗಲೇ ಪ್ರತಿ ವರ್ಷ ಶೇ. 12.60 ಬಡ್ಡಿ ದರದಲ್ಲಿ ಏಳು ವರ್ಷಗಳ ಅವಧಿಗೆ ಭಾರತೀಯ ಜೀವ ವಿಮಾ ನಿಗಮ ಹಣಕಾಸು ಸಂಸ್ಥೆಯಿಂದ ಪಡೆದಿರುವ ಸಾಲವನ್ನು ಆ ಸಂಸ್ಥೆಗೆ ಹಿಂತಿರುಗಿಸುವ ಸಲುವಾಗಿ ಶೇ. 7.5 ರಿಂದ 7.75 ರವರೆಗಿನ ಕಡಿಮೆ ಬಡ್ಡಿ ದರದಲ್ಲಿ ಬೇರೆ ಹಣಕಾಸು ಸಂಸ್ಥೆಗಳಿಂದ ಸಾಲವನ್ನು ಪಡೆಯಲು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತಕ್ಕೆ ಅನುಮೋದನೆ ನೀಡಿದೆ. ಹಾಗೂ ಶೇ.1% ಖಾತರಿ ಶುಲ್ಕ ಪಾವತಿಸುವ ಷರತ್ತಿಗೆ ಒಳಪಟ್ಟು ಹಿಂದೆ ನೀಡಿದ್ದ ಸರ್ಕಾರಿ ಖಾತರಿಯನ್ನು ನವೀಕರಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 28.06.2004ರ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ/ 633/ ಎಫ್‌ಸಿ-1/2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್.942

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ. ಕೋಶ).

**ವಿಷಯ:** ಬ್ಯಾಂಕ್ ಆಫ್ ಇಂಡಿಯಾ ದಿಂದ ಪಡೆದಿರುವ ರೂ. 50.00 ಕೋಟಿ ಸಾಲವನ್ನು ಮುಂದುವರಿಸುವುದರೊಂದಿಗೆ ಸರ್ಕಾರದ ಖಾತರಿಯನ್ನು ನವೀಕರಿಸುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ನೀಇ 25 ಡಬ್ಲ್ಯೂಬಿಎಂ 92 ದಿನಾಂಕ:06.05.1994.
2. ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ (ಕೆಬಿಜೆಎನ್‌ಎಲ್)ದ ಆರ್ಥಿಕ ನಿರ್ದೇಶಕರ ಪತ್ರ ಸಂಖ್ಯೆ: ಕೆಬಿಜೆಎನ್‌ಎಲ್/ ಡಿಎಫ್/ ಎಜಿಎಂ:ಬಿಒಐ:ಬಿ-10:03-04/ಎಫ್ ದಿನಾಂಕ: 18.03.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶಾನುಸಾರ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ (ಕೆಬಿಜೆಎನ್‌ಎಲ್) ವನ್ನು ಕಂಪನಿ ಕಾಯ್ದೆ 1956ರ ಅಡಿಯಲ್ಲಿ ರಚಿಸಲಾಯಿತು. ನಿಗಮದ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕಾರ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು, ಕೃಷ್ಣಾ ನದಿ ನೀರಿನ ಹಂಚಿಕೆಗಾಗಿ ನೇಮಿಸಲಾದ ನ್ಯಾಯ ಮಂಡಳಿಯು ಕೃಷ್ಣಾ ಕೊಳ್ಳದಲ್ಲಿ ಕರ್ನಾಟಕ ರಾಜ್ಯಕ್ಕೆ ನಿಗದಿಪಡಿಸಿರುವ 734 ಟಿಎಂಸಿ ನೀರಿನ ಪ್ರಮಾಣದಲ್ಲಿ (ಬಚಾವತ್ ಅವಾರ್ಡ್‌ನಂತೆ) ಕೃಷ್ಣಾ ಮೇಲ್ದಂಡೆ ಯೋಜನೆಗೆ ನಿಗದಿಪಡಿಸಿರುವ 173 ಟಿಎಂಸಿ ನೀರಿನ ಪ್ರಮಾಣವನ್ನು ಉಪಯೋಗಿಸಿಕೊಂಡು ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವ ಜವಬ್ದಾರಿಯನ್ನು ಹೊಂದಿದೆ.

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ತನ್ನ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕಾರ, ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಾದ ಸಂಪನ್ಮೂಲವನ್ನು ಬಾಂಡ್ಸ್: ಡಿಬೆಂಚರ್ಸ್‌ಗಳನ್ನು ಬಿಡುಗಡೆ ಮಾಡುವುದರ ಮೂಲಕ ಕ್ರೋಢೀಕರಿಸುತ್ತದೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ಇಲ್ಲಿಯವರೆಗೆ ರೂ. 6259.25 ಕೋಟಿಗಳನ್ನು (1995-96ನೇ ಸಾಲಿನಿಂದ 2003-2004ನೇ ಸಾಲಿನ ಮಾರ್ಚ್ ಮಾಹೆಯವರೆಗೆ) ಈ ಕೆಳಕಂಡಂತೆ ಸಂಗ್ರಹಿಸಿರುತ್ತದೆ.

| Year | Series | Borrowing | Amount mobilized (Rs. in Crores) | Total Amount mobilized (Rs. in Crores) |
|---|---|---|---|---|
| 1 | 2 | 3 | 4 | 5 |
| 1995-96 | I | Private | 180.00 | 180.00 |
| 1996-97 | II | Public | 300.00 | |
| | III | Private | 25.15 | |
| | IV | Private | 184.33 | |
| | | Term loan | 57.82 | 567.30 |
| 1997-98 | V | Private | 403.98 | |
| | VI-A | Private | 108.74 | |
| | VI-B | Private | 296.86 | |
| | | Short term loan | 200.00 | 1009.58 |
| 1998-99 | VII-A | Private | 320.20 | |
| | VII-B | Private | 290.41 | |
| | | Hudco (R & R) | 36.00 | 646.61 |
| 1999-2000 | VIII-A | Private | 58.05 | |
| | VIII-B | Private | 312.17 | |
| | | Hudco (R & R) | 165.49 | 535.71 |
| 2000-2001 | VIII-C | Private | 507.70 | |
| | IX-A | Private | 297.36 | |
| | | Hudco | 141.20 | |
| | IX-A-I | Private | 50.00 | |
| | IX-A-II | Private | 25.00 | |
| | IX-A-III | Private | 230.42 | |
| | Bank of India | | 25.00 | |
| | DCB | | 25.00 | 1301.68 |
| 2001-2002 | X-A | Private | 105.58 | |
| | X-B | Private | 25.00 | |
| | C-C | Private | 174.22 | |
| | DCB | | 20.00 | |
| | Bank of India | | 50.00 | |
| | LIC | | 50.00 | |
| | ICICI | | 50.00 | |
| | Syndicate Bank | | 50.00 | |
| | BMRTL | | 26.18 | |
| | Indian Bank | | 25.00 | |
| | Hudco | | 40.00 | |
| | UBI | | 50.00 | |
| | Uco Bank | Private | 50.00 | |
| | X-D | | 122.75 | 838.73 |
| 2002-2003 | IX-B | Public | 350.17 | |
| | XI-A | Private | 50.00 | |
| | XI-B | Private | 51.73 | |
| | XI-C | Private | 85.95 | |
| | Uco Bank | | 50.00 | |
| | Central Bank | | 50.00 | |
| | Bank of India | | 50.00 | |
| | DCB | | 45.00 | |
| | UBI | | 50.00 | |
| | BMRTL | | 21.78 | 804.63 |
| | | | | **5884.24** |
| 2003-2004 | XII-B | Private | 110.50 | |
| | XII-C | | 165.00 | |
| | Uco Bank | Long Term | 50.00 | |
| | Dena Bank | | 50.00 | 375.50 |
| | | | | **6259.25** |

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ಕೃಷ್ಣಾ ಮೇಲ್ದಂಡೆ ಯೋಜನೆಗೆ 1995-96 ರಿಂದ 2003-2004ನೇ ಸಾಲಿನ ಮಾರ್ಚ್ ರವರೆಗೆ ಕ್ರೋಢೀಕರಿಸಿರುವ ಹಣದಲ್ಲಿ ಈ ಕೆಳಕಂಡಂತೆ ವೆಚ್ಚ ಮಾಡಿದ್ದು, ಇದರಲ್ಲಿ ಸರ್ಕಾರದ ವತಿಯಿಂದ ಮಾಡಿರುವ ವೆಚ್ಚವೂ ಸೇರಿರುತ್ತದೆ.

ರೂ. ಕೋಟಿಗಳಲ್ಲಿ

| ವಿವರಗಳು | 1995-1996 | 1996-1997 | 1997-1998 | 1998-1999 | 1999-2000 | 2000-2001 | 2001-2002 | 2002-2003 | 2003-2004 |
|---|---|---|---|---|---|---|---|---|---|
| ಸರ್ಕಾರ | 274.39 | 157.10 | 46.68 | 17.84 | - | - | - | - | - |
| ಕೆಬಿಜೆಎನ್ಎಲ್ (ನಿಗಮ) | 113.67 | 557.19 | 738.92 | 1068.36 | 1081.41 | 1494.17 | 1503.07 | 2205.82 | 2481.66 |
| **ಒಟ್ಟು** | **388.06** | **714.29** | **785.60** | **1086.20** | **1018.41** | **1494.17** | **1503.07** | **2205.82** | **2481.66** |

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಆರ್ಥಿಕ ನಿರ್ದೇಶಕರು, ಬ್ಯಾಂಕ್ ಆಫ್ ಇಂಡಿಯಾದಿಂದ ಈಗಾಗಲೇ ಅಂದರೆ 2002-03ನೇ ಸಾಲಿನಲ್ಲಿ ಪಡೆದುಕೊಂಡಿರುವ ರೂ 50.00 ಕೋಟಿಗಳ ಸಾಲ ಮರುಪಾವತಿ ಬಗ್ಗೆ ಪ್ರಸ್ತಾಪಿಸುತ್ತಾ, 9 ತಿಂಗಳ ಅವಧಿಗೆ ಶೇಕಡಾ 8.75ರ ವಾರ್ಷಿಕ ಬಡ್ಡಿ ದರದಲ್ಲಿ ಬ್ಯಾಂಕ್ ಆಫ್ ಇಂಡಿಯಾದಿಂದ ಪಡೆದುಕೊಂಡಿದ್ದ ರೂ. 50.00 ಕೋಟಿಗಳನ್ನು ದಿನಾಂಕ: 27.12.2003ರೊಳಗಾಗಿ ಬಡ್ಡಿ ಸಮೇತ ಪಾವತಿ ಮಾಡಬೇಕಾಗಿತ್ತು. ಆದರೆ ನಿಗಮಕ್ಕೆ ಹಣಕಾಸಿನ ಅವಶ್ಯಕತೆ ಇದ್ದುದರಿಂದ ಮರುಪಾವತಿ ಮಾಡಲಾಗಲಿಲ್ಲ, ಬದಲಿಗೆ ಮತ್ತೆ ಒಂದು ವರ್ಷದ ಅವಧಿಗೆ ಶೇಕಡ 7ರಿಂದ 7.25ರ ವಾರ್ಷಿಕ ಬಡ್ಡಿದರದಂತೆ ಮುಂದುವರಿಸಲು ಬ್ಯಾಂಕನ್ನು ಕೋರಲಾಗಿ, ಇದಕ್ಕೆ ಬ್ಯಾಂಕ್ ವಾರ್ಷಿಕ ಬಡ್ಡಿದರ ಶೇಕಡ 7.4 ರಂತೆ (ಪ್ರತಿ ತಿಂಗಳು ಚಕ್ರಬಡ್ಡಿಯಂತೆ) ನಿಗದಿ ಪಡಿಸಿ ದಿನಾಂಕ: 28.12.2003ರಿಂದ ಮುಂದಿನ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 27.12.2004ರವರೆಗೆ ವಿಸ್ತರಿಸಲು ಒಪ್ಪಿತು. ತದನಂತರ ನಿಗಮದ ಹಣಕಾಸು ಸಮಿತಿಯಲ್ಲಿಯೂ (17ನೇ ಸಭೆಯಲ್ಲಿ) ಈ ವಿಷಯ ಮಂಡಿಸಿ ಒಪ್ಪಿಗೆಯನ್ನು ಪಡೆದುಕೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ಬ್ಯಾಂಕ್ ಆಫ್ ಇಂಡಿಯಾದ ರೂ. 50.00 ಕೋಟಿಗಳ ಸಾಲದ ಅವಧಿಯನ್ನು ಮುಂದುವರಿಸುವುದರ ಜೊತೆಗೆ ಮತ್ತು ಈಗಾಗಲೇ ನೀಡಲ್ಪಟ್ಟಿರುವ ಸರ್ಕಾರದ ಖಾತರಿಯನ್ನು ನವೀಕರಿಸಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 53 ಕೆಬಿಎನ್ 2004, ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2004**

ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತವು ಈಗಾಗಲೇ ಬ್ಯಾಂಕ್ ಆಫ್ ಇಂಡಿಯಾದಿಂದ ಪಡೆದಿರುವ ರೂ. 50.00 ಕೋಟಿ ಸಾಲವನ್ನು ಮುಂದಿನ ಒಂದು ವರ್ಷದ ಅವಧಿಗೆ ಮುಂದುವರಿಸಲು ಸದರಿ ಬ್ಯಾಂಕ್ ಒಪ್ಪಿರುವಂತೆ ದಿನಾಂಕ: 27.12.2004ಕ್ಕೆ ಕೊನೆಗೊಳ್ಳುವಂತೆ, ಶೇಕಡ 7.4ರ ವಾರ್ಷಿಕ ಬಡ್ಡಿದರದಂತೆ (ಪ್ರತಿ ತಿಂಗಳು ಚಕ್ರಬಡ್ಡಿಯೂ ಸೇರಿ) ಮುಂದುವರಿಸಲು ಅನುಮೋದನೆ ನೀಡಲಾಗಿದೆ. ಮತ್ತು ಶೇಕಡಾ 1ರಷ್ಟು ಖಾತರಿ ಶುಲ್ಕ ಪಾವತಿಸುವ ನಿಬಂಧನೆಯೊಂದಿಗೆ ಸರ್ಕಾರದ ಖಾತರಿಯನ್ನು ನವೀಕರಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 21.05.2004ರ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ/ 525/ ಎಫ್‌ಸಿ-1/2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್.943

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),

ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ. ಕೋಶ).

## PLANNING AND STATISTICS SECRETARIAT

**Sub:** Continuation of the posts of Research officers and Computer Programmer.

**Read:** 1) G.O. No. PD 52 SPB 2002 Dated: 26.12.2002

2) G.O. No. PD 14 SPB 2004, Dated: 05.02.2004

**Preamble:**

In the Government Order dated: 26.12.2002 read at (1) above the following three technical posts were created in the State Planning Board for a period of ONE YEAR.

i) Two posts of Research Officers

ii) One post of Computer Programmer

In the Government Order dated: 05.02.2004 read at (2) above, Shri D.M. Sali, Advocate and Ex-Chief Whip, Hirekerur, Haveri District has been appointed as Deputy Chairman of the State Planning Board.

As the two posts of Research Officers and One post of Computer Programmer are required and have to be continued with effect from 27.12.2003. Hence, the following order.

**Government Order No. PD 19 SPB 2004, Bangalore, Dated: 26th August, 2004**

Sanction is accorded for the continuance of two posts of Research Officers and One Post of Computer Programmer in the State Planning Board with effect from 27.12.2003 co-terminus with the term of the Deputy Chairman, State Planning Board or One Year whichever is less.

This order issues in pursuance of the delegation of powers vested in the Secretaries to Government, vide Government Order No. FD 1 TFP 96 Dated: 10.07.1996.

By Order and in the name of Governor of Karnataka

**N.O. PALEKAR**

PR-944

Under Secretary to Government-3
Planning and Statistics Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಉದ್ದೇಶಿತ ಗುಲ್ಬರ್ಗಾ ಎಂ.ಎಸ್.ಕೆ. ಮಿಲ್ಲಿನ ವಸತಿ ಮತ್ತು ವಾಣಿಜ್ಯ ಯೋಜನೆಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ಗುನಪ್ರಾ: ನಯೋಸ:ರೂಪರೇಖೆ: 2003-04: 2539, ದಿನಾಂಕ: 24.01.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಗುಲ್ಬರ್ಗಾ ನಗರದ ಎಂ.ಎಸ್.ಕೆ. ಮಿಲ್ಲಿನವರಿಂದ ಪಡೆದ ಬ್ರಹ್ಮಪುರ ಗ್ರಾಮದ ಸ.ನ.101/1, 109, 110 ಮತ್ತು ಹೀರಾಪುರ ಗ್ರಾಮದ ಸ.ನಂ.16/2, 17, 19/1, 20/2 ಮತ್ತು 21/2 ಹಾಗೂ ಬಿದ್ದಾಪುರ ಗ್ರಾಮದ ಸ.ನಂ. 1/2 ರಲ್ಲಿ ಒಟ್ಟು 105 ಎಕರೆ 33 ಗುಂಟೆ ಜಮೀನಿನಲ್ಲಿ ವಸತಿ ಮತ್ತು ವಾಣಿಜ್ಯ ಬಳಕೆಗೆ ಯೋಜನೆಯನ್ನು ಸಿದ್ಧಪಡಿಸಿ ಯೋಜನಾ ವರದಿಯೊಂದಿಗೆ ಸರ್ಕಾರದ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

ರೂ. 17.8 ಕೋಟಿಗಳನ್ನು ಸಿಂಡಿಕೇಟ್ ಬ್ಯಾಂಕ್, ಗುಲ್ಬರ್ಗಾ ಇವರಿಂದ ಸಾಲ ಪಡೆದು ಪ್ರಾಧಿಕಾರವು 165.8 ಎಕರೆ ಜಮೀನನ್ನು ಎನ್.ಟಿ.ಸಿ. ಇವರಿಂದ ಖರೀದಿ ಮಾಡಿದ್ದು, ಈಗ ಪಡೆದಿರುವ ಸಾಲಕ್ಕೆ ಬಡ್ಡಿ ಪ್ರಾರಂಭವಾಗಿರುತ್ತದೆ. ಅಭಿವೃದ್ಧಿ ಹೊಂದಿದ ಪ್ರತಿಷ್ಠಿತ ಬಡಾವಣೆಯಲ್ಲಿ ಎಂ.ಎಸ್.ಕೆ. ಮಿಲ್ಲಿನ ಜಮೀನು ಇದ್ದು, ಈ ಜಮೀನಿನಲ್ಲಿ ಬಡಾವಣೆಯನ್ನು ರಚಿಸಿದರೆ ಆರ್ಥಿಕವಾಗಿ ಪ್ರಾಧಿಕಾರಕ್ಕೆ ಅನುಕೂಲವಾಗುವುದಲ್ಲದೆ ನಿವೇಶನಗಳಿಗೆ ಸಾರ್ವಜನಿಕರಿಂದ ಬೇಡಿಕೆ ಬರುತ್ತದೆ. ಈ ಹಿನ್ನೆಲೆಯಲ್ಲಿ ಸುಮಾರು 105 ಎಕರೆ ಜಮೀನಿನಲ್ಲಿ ಪ್ರಾಧಿಕಾರವು ವಸತಿ ಮತ್ತು ವಾಣಿಜ್ಯ ಬಡಾವಣೆ ರಚಿಸಲು ಉದ್ದೇಶಿಸಿರುತ್ತದೆ. ಈ ಉದ್ದೇಶಿತ ಯೋಜನೆಯಿಂದ ಪ್ರಾಧಿಕಾರಕ್ಕೆ ರೂ. 4.89 ಕೋಟಿ ಆದಾಯವನ್ನು ನಿರೀಕ್ಷಿಸಲಾಗಿದೆ.

ಉದ್ದೇಶಿತ ಬಡಾವಣೆಯಲ್ಲಿ 826 ವಾಸ ಯೋಗ್ಯ ನಿವೇಶನ ಮತ್ತು 193 ವಾಣಿಜ್ಯ ನಿವೇಶನಗಳನ್ನು ರಚಿಸಬಹುದು. ರೂ. 41.53 ಕೋಟಿಗಳಲ್ಲಿ ಜಮೀನಿನ ವೆಚ್ಚವೂ ಸೇರಿರುತ್ತದೆ. ಈ ಯೋಜನೆಯನ್ನು ಕಾರ್ಯಗತಗೊಳಿಸುವಾಗ ರಾಜ್ಯದ ಬೊಕ್ಕಸಕ್ಕೆ ಯಾವುದೇ ಆರ್ಥಿಕ ಹೊರೆ ಇರುವುದಿಲ್ಲ. ಆದ್ದರಿಂದ, ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು 105 ಎಕರೆ ಜಮೀನಿನಲ್ಲಿ ರೂ. 41.53 ಕೋಟಿಗಳಲ್ಲಿ ರಚಿಸಲಿರುವ ವಸತಿ ಬಡಾವಣೆಗೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಅಧಿನಿಯಮ 18(3) ರನ್ವಯ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 128 ಗುಅಪ್ರಾ 2003, ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2004**

ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಗುಲ್ಬರ್ಗಾ ನಗರದ ಎಂ.ಎಸ್.ಕೆ. ಮಿಲ್ಲಿನವರಿಂದ ಪಡೆದ ಬ್ರಹ್ಮಪುರ ಗ್ರಾಮದ ಸ.ನಂ.101/1, 109, 110 ಮತ್ತು ಹೀರಾಪುರ ಗ್ರಾಮದ ಸ.ನಂ.16/2, 17, 19/1, 20/2 ಮತ್ತು 21/2 ಹಾಗೂ ಬಿದ್ದಾಪುರ ಗ್ರಾಮದ ಸ.ನಂ.1/2 ರಲ್ಲಿ ಒಟ್ಟು 105 ಎಕರೆ ಜಮೀನಿನಲ್ಲಿ ಅಂದಾಜು ವೆಚ್ಚ 41.53 ಕೋಟಿ ರೂ.ಗಳಲ್ಲಿ (ರೂ. ನಲವತ್ತೊಂದು ಕೋಟಿ ಐವತ್ಮೂರು ಲಕ್ಷ ರೂ.ಗಳು) ವಿವಿಧ ಅಳತೆಯ 826 ವಾಸ ಯೋಗ್ಯ ನಿವೇಶನ ಹಾಗೂ 193 ವಾಣಿಜ್ಯ ನಿವೇಶನಗಳನ್ನು ರಚಿಸಿ ವಿತರಿಸುವ ಸಂಬಂಧದಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯಿದೆ 1987ರ ಅಧಿನಿಯಮ 18(3)ರನ್ವಯ ಆಡಳಿತಾತ್ಮಕ ಅನುಮೋದನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲಾಗಿದೆ.

1. ಈ ಯೋಜನೆಯನ್ನು ಎರಡು ವರ್ಷಗಳ ಕಾಲಮಿತಿಯೊಳಗೆ ಅಭಿವೃದ್ಧಿಪಡಿಸಿ ನಿವೇಶನಗಳನ್ನು ವಿತರಿಸತಕ್ಕದ್ದು.
2. ಸರ್ಕಾರದಿಂದ ಧನಸಹಾಯ/ ಗ್ಯಾರಂಟಿಯನ್ನು ನಿರೀಕ್ಷಿಸದೇ ಯೋಜನೆಯ ಪೂರ್ಣ ವೆಚ್ಚವನ್ನು ಪ್ರಾಧಿಕಾರವೇ ಭರಿಸತಕ್ಕದ್ದು.
3. ಯೋಜನೆಯಲ್ಲಿರುವ ವಾಣಿಜ್ಯ ನಿವೇಶನಗಳನ್ನು ನಿಯಮಾನುಸಾರ ಹರಾಜು ಮಾಡಿ ಬ್ಯಾಂಕಿನಿಂದ ಪಡೆದಿರುವ ಸಾಲವನ್ನು ಮರು ಪಾವತಿ ಮಾಡಲು ಕ್ರಮ ಕೈಗೊಳ್ಳುವುದು.
4. ಯೋಜನೆಯಲ್ಲಿ ಒಳಗೊಂಡಿರುವ ಎಲ್ಲಾ ಕಾಮಗಾರಿಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಕರ್ನಾಟಕ ಪಾರದರ್ಶಕತೆ ಕಾಯಿದೆ, 2000ರಲ್ಲಿನ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್.945

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎ.ಎಂ. ಶೇಖ್ ಅಧೀಕ್ಷಕರು, ಬಿ.ಇ.ಓ. ಕಛೇರಿ, ಬೈಲಹೊಂಗಲ, ಬೆಳಗಾವಿ ಜಿಲ್ಲೆ ಇವರು ದಂಡನೆ ಆದೇಶದ ವಿರುದ್ಧ ಸಲ್ಲಿಸಿರುವ ಪುನರ್ ಪರಿಶೀಲನಾ ಮನವಿ

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 126 ಡಿಜಿಡಿ 99 ದಿನಾಂಕ: 14.01.2003

2. ಶ್ರೀ ಎ.ಎಂ. ಶೇಖ್, ಅಧೀಕ್ಷಕರು ಇವರ ಮನವಿ ದಿನಾಂಕ: 14.02.2003.

**ಪ್ರಸ್ತಾವನೆ:**

ಶ್ರೀ ಎ.ಎಂ. ಶೇಖ್, ಅಧೀಕ್ಷಕರು, ಬಿ.ಇ.ಓ. ಕಛೇರಿ, ಬೈಲಹೊಂಗಲ, ಬೆಳಗಾವಿ ಇವರು ಈ ಹಿಂದೆ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ಬಿ.ಇ.ಓ. ಕಛೇರಿಯಲ್ಲಿ ಅಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಆರೋಪಗಳಿಗೆ ಸರ್ಕಾರವು ಶಿಸ್ತುಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಿ, ವಿಚಾರಣೆ ನಡೆಸಲಾಯಿತು. ವಿಚಾರಣೆಯಲ್ಲಿ ಸದರಿಯವರ ಮೇಲಿನ ಕೆಳಕಂಡ ಆರೋಪಗಳು ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 14.01.2003ರ ಸರ್ಕಾರಿ ಆದೇಶದ ಮೂಲಕ ಒಂದು ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು, ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಲಾಗಿತ್ತು.

**ಆರೋಪ 4**

1996-97ನೇ ಸಾಲಿನಿಂದ ಜೋಯಿಡಾ ತಾಲ್ಲೂಕಿನ ಶಿಕ್ಷಕರುಗಳು ಶಿಕ್ಷಕರ ಸಹಕಾರ ಸಂಘದಲ್ಲಿ ಪಡೆದ ಸಾಲದ ಮರುಪಾವತಿಯ ಕಂತುಗಳನ್ನು ಶಿಕ್ಷಕರ ವೇತನದಲ್ಲಿ ಕಟಾಯಿಸಿ, ಕಟಾವಣೆ ಮಾಡಿದ ಕಂತಿನ ಹಣವನ್ನು ಆಯಾಯ ತಿಂಗಳುಗಳಲ್ಲಿ ಶಿಕ್ಷಕರ ಸಹಕಾರ ಸಂಘಕ್ಕೆ ಪಾವತಿ ಮಾಡದೇ ಶಿಕ್ಷಕರುಗಳು ಹೆಚ್ಚಿನ ಬಡ್ಡಿ ತೆರುವಂತಾಗಲು ಕಾರಣರಾಗಿರುವುದು;

**ಆರೋಪ 5**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಮನಗರ ಇಲ್ಲಿ 15 ಶಿಕ್ಷಕರ ಹುದ್ದೆ ಮಾತ್ರ ಮಂಜೂರಾಗಿದ್ದರೂ ಮಾರ್ಚ್ 1997ರ ವೇತನದಲ್ಲಿ 19 ಶಿಕ್ಷಕರುಗಳಿಗೆ ವೇತನ ಪಾವತಿಸುವ ಮೂಲಕ ಹೆಚ್ಚುವರಿಯಾಗಿ ನಾಲ್ಕು ಶಿಕ್ಷಕರಿಗೆ ವೇತನ ಪಾವತಿಸಿ ಸರ್ಕಾರದ ಬೊಕ್ಕಸಕ್ಕೆ ನಷ್ಟವನ್ನುಂಟುಮಾಡಿರುವುದು.

**ಆರೋಪ 6**

1995-96ನೇ ಸಾಲಿನ ಬ್ಲಾಕ್ ಅವಧಿಯ ಗಳಿಕೆ ರಜೆ ವೇತನವನ್ನು ದಿನಾಂಕ: 01.01.1997 ರಿಂದ 30.01.1997ರವರೆಗೆ ನಗದೀಕರಣ ಸೌಲಭ್ಯವನ್ನು ನಿಯಮಬಾಹಿರವಾಗಿ ಮಂಜೂರು ಮಾಡಿ ಸರ್ಕಾರಕ್ಕೆ ನಷ್ಟವನ್ನುಂಟುಮಾಡಿರುವುದು.

ದಂಡನೆ ಆದೇಶದ ವಿರುದ್ಧ ಶ್ರೀ ಎ.ಎಂ. ಶೇಖ್, ಅಧೀಕ್ಷಕರು ಇವರು ದಿನಾಂಕ: 14.02.2003ರಂದು ಪುನರ್ ಪರಿಶೀಲನಾ ಮನವಿ ಸಲ್ಲಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ತಳ್ಳಿಹಾಕಿ, ದಂಡನೆ ಆದೇಶವನ್ನು ರದ್ದುಗೊಳಿಸುವಂತೆ ಕೋರಿದ್ದಾರೆ. ಪುನರ್ ಪರಿಶೀಲನಾ ಮನವಿಯಲ್ಲಿನ ಅಂಶಗಳನ್ನು ದಾಖಲಾತಿಗಳಿಂದ ಪೂರ್ಣ ಪ್ರಮಾಣದಲ್ಲಿ ಪರಿಶೀಲಿಸಲಾಗಿದೆ. ಮನವಿಯಲ್ಲಿ ಯಾವುದೇ ಹೊಸ ಅಂಶದ ಬೆಳಕಿನಲ್ಲಿ ದಂಡನೆಯನ್ನು ರದ್ದುಗೊಳಿಸಲು ಕೋರಿರುವುದಿಲ್ಲದಿರುವುದನ್ನು ಮನಗಂಡು, ಪುನರ್ ಪರಿಶೀಲನಾ ಮನವಿಯನ್ನು ತಿರಸ್ಕರಿಸಲು ನಿರ್ಧರಿಸಲಾಯಿತು. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 127 ಡಿಜಿಡಿ 2003, ಬೆಂಗಳೂರು, ದಿನಾಂಕ: 19ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಎ.ಎಂ. ಶೇಖ್, ಅಧೀಕ್ಷಕರು, ಬಿ.ಇ.ಓ. ಕಛೇರಿ, ಬೈಲಹೊಂಗಲ, ಬೆಳಗಾವಿ ಜಿಲ್ಲೆ ಇವರು ದಂಡನೆ ಆದೇಶದ ವಿರುದ್ಧ ಸಲ್ಲಿಸಲಾದ ಪುನರ್ ಪರಿಶೀಲನಾ ಮನವಿಯನ್ನು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 25(2)ರ ಅಡಿಯಲ್ಲಿ ಪರಿಶೀಲಿಸಲಾಗಿ, ಪುನರ್ ಪರಿಶೀಲನಾ ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇಲ್ಲದಿರುವ ಕಾರಣ ಅವರ ಮೇಲ್ಮನವಿಯನ್ನು ತಿರಸ್ಕರಿಸಿದೆ, ಹಾಗೂ ದಿನಾಂಕ: 14.01.2003 ಸಂಖ್ಯೆ: ಇಡಿ 126 ಡಿಜಿಡಿ 99ರ ಸರ್ಕಾರಿ ಆದೇಶದ ಮೂಲಕ ವಿಧಿಸಿರುವ ದಂಡನೆಯನ್ನೇ "ಸ್ಥಿರೀಕರಿಸಿ" ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್.946

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು 1,2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಗುಲ್ಬರ್ಗಾ ಇಲ್ಲಿ ಪ್ರಿಸೈಡಿಂಗ್ ಅಧಿಕಾರಿಯಾಗಿ ನೇಮಕಾತಿ ಹೊಂದಿದ ಶ್ರೀ ಬಸಣ್ಣ ಮಾನುರೇ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಗುತ್ತಿಗೆ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಲಾ 369 ಎಲ್ಎಎಂ 2000, ದಿನಾಂಕ: 29.05.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 48 ಎಸ್ಎಚ್ಸಿ 2001, ದಿನಾಂಕ: 06.08.2001.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸೇಉನ್ಯಾ 2001, ದಿನಾಂಕ: 21.08.2001.
4. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಓಬಿ (1) 585:2000, ದಿನಾಂಕ: 22.03.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎರಡು ವರ್ಷಗಳಿಗಿಂತ ಹೆಚ್ಚಾಗಿ ಬಾಕಿ ಇರುವ ನ್ಯಾಯಾಲಯ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸಲು 11ನೇ ಆರ್ಥಿಕ ಆಯೋಗದ ಶಿಫಾರಸ್ಸಿನನ್ವಯ 13 ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳನ್ನು ರಾಜ್ಯದಲ್ಲಿ ವಿವಿಧ ಸ್ಥಳಗಳಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಹೊಸದಾಗಿ ಸ್ಥಾಪಿಸಲಾದ ಫಾಸ್ಟ್ ಟ್ರ್ಯಾಕ್ ಕೋರ್ಟ್‌ಗಳಿಗೆ 13 ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳನ್ನು ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ15 ರನ್ವಯ ಗುತ್ತಿಗೆ ಆಧಾರದ ಮೇಲೆ ಮಾಸಿಕ ರೂ. 9,500 ಗಳ ಸಂಚಿತ ವೇತನದ ಮೇಲೆ ಪ್ರಥಮ 2 ವರ್ಷಗಳ ಅವಧಿಗೆ ಪ್ರಿಸೈಡಿಂಗ್ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ ಹಾಗೂ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ರೀತಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಪ್ರಿಸೈಡಿಂಗ್ ಅಧಿಕಾರಿಗಳ ನೇಮಕಾತಿ ಬಗ್ಗೆ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 22.03.2004ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರು, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಅಧಿಕಾರಿಗಳಾಗಿ ನೇಮಿಸಲಾದ 13 ನಿವೃತ್ತ ನ್ಯಾಯಾಧೀಶರ ಪೈಕಿ ಶ್ರೀ ಬಸವಣ್ಣ ಮಾನುರೇ, ನಿವೃತ್ತ ನ್ಯಾಯಾಧೀಶರು ದಿನಾಂಕ: 01.04.2002ರಂದು ಕರ್ತವ್ಯಕ್ಕೆ ಹಾಜರಾಗಿದ್ದು ಅವರ ನೇಮಕಾತಿ ಅವಧಿಯು ದಿನಾಂಕ: 31.03.2004ಕ್ಕೆ ಮುಕ್ತಾಯವಾಗಿರುವುದಾಗಿ ತಿಳಿಸಿ ಒಪ್ಪಂದದ ಆಧಾರದ ಮೇಲೆ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯದಲ್ಲಿ ಪ್ರಿಸೈಡಿಂಗ್ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿರುವ ನ್ಯಾಯಾಧೀಶರ ತೃಪ್ತಿಕರ ಸೇವೆಯನ್ನು ಪರಿಗಣಿಸಿ ಶ್ರೀ ಬಸಣ್ಣ ಮಾನುರೇ ಅವರ ಸೇವೆಯನ್ನು ಮುಂದುವರೆಸುವ ಅಗತ್ಯವಿರುವ ಕಾರಣ ಈ ಹಿಂದೆ ಹೊರಡಿಸಿದ ನೇಮಕಾತಿ ಷರತ್ತುಗಳಿಗೆ ಒಳಪಟ್ಟು ದಿನಾಂಕ: 01.04.2004ರಂದು ಮುಂದಿನ ಆದೇಶದವರೆಗೆ ಅವರ ಸೇವೆಯನ್ನು ಮುಂದುವರೆಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 32 ಸೇಉನ್ಯಾ 2004, ಬೆಂಗಳೂರು, ದಿನಾಂಕ: 19ನೇ ಆಗಸ್ಟ್, 2004**

ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಗುಲ್ಬರ್ಗಾ, ಇಲ್ಲಿ ಪ್ರಿಸೈಡಿಂಗ್ ಅಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಬಸಣ್ಣ ಮಾನುರೇ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಈ ಹಿಂದಿನ ನೇಮಕಾತಿಯ ಷರತ್ತುಗಳಿಗೆ ಒಳಪಟ್ಟು ದಿನಾಂಕ: 01.04.2004ರಿಂದ 31.03.2005ರವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ನಿಯಮ 15ರಡಿ ಯಾವುದೇ ಭತ್ಯೆಗಳಿಲ್ಲದೆ ಮಾಸಿಕ ರೂ. 9,500 ಗಳ ಸಂಚಿತ ವೇತನದೊಂದಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 552 ವೆಚ್ಚ-7:04 ದಿನಾಂಕ: 23.06.2004ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್.947

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕೊಡಗು ಜಿಲ್ಲೆ ಮಡಿಕೇರಿ ನಗರಸಭೆ ಮಧ್ಯ ಭಾಗದಲ್ಲಿ ಹಾದು ಹೋಗುವ ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿ.ಮೀ ರಿಂದ 100.00 ಕಿಮೀ ವರೆಗಿನ 4.80 ಕಿಮೀ ಉದ್ದದ ರಸ್ತೆಯನ್ನು ನಗರಸಭೆಗೆ ವರ್ಗಾಯಿಸಲು ಹಾಗೂ ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿಮೀ ರಿಂದ ರಾಜ್ಯ ಹೆದ್ದಾರಿ-88ರ ಸರಪಳಿ 117.10 ಕಿಮೀ ನ್ನು ಸಂಪರ್ಕಿಸುವ 365 ಮೀಟರ್ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ-27 ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ:ಸಇ೦7:ಕೊಡಗು: ರಾಜ್ಯ ಹೆದ್ದಾರಿ 27: ಮಡಿಕೇರಿ ಪುರಸಭೆ:04-05, ದಿನಾಂಕ: 29.01.2004 ಹಾಗೂ 26.07.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಡಿಕೇರಿ ಮಧ್ಯ ಭಾಗದಲ್ಲಿ ಹಾದು ಹೋಗುವ ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿಮೀ ನಿಂದ ಸರಪಳಿ 100.00 ಕಿಮೀ ವರೆಗಿನ 4.80 ಕಿಮೀ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ 27 ರಿಂದ ಹೊರತುಪಡಿಸಿ ಈ 4.80 ಕಿಮೀ ಉದ್ದದ ರಾಜ್ಯ ಹೆದ್ದಾರಿಯನ್ನು ನಗರಸಭೆ ಮಡಿಕೇರಿಗೆ ವರ್ಗಾಯಿಸಲು ಹಾಗೂ ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿಮೀ ಹಾಗೂ ರಾಜ್ಯ ಹೆದ್ದಾರಿ-88ರ ಸರಪಳಿ 117.10 ಕಿಮೀನ್ನು ಸಂಪರ್ಕಿಸುವ ಹಾಲಿ ಇರುವ 365 ಮೀಟರ್ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ-27 ಎಂದು ಘೋಷಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ನಗರಸಭೆ ಮಧ್ಯದಲ್ಲಿ ಹಾದುಹೋಗುವ 4.80 ಕಿಮೀ ಉದ್ದದ ರಾಜ್ಯ ಹೆದ್ದಾರಿಯನ್ನು (27) ನಗರಸಭೆಗೆ ವರ್ಗಾಯಿಸಲು ಮಡಿಕೇರಿ ನಗರಸಭೆಯ ಇವರ ಆಕ್ಷೇಪಣೆ ಇರುವುದಿಲ್ಲವೆಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 27 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 20ನೇ ಆಗಸ್ಟ್, 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮಡಿಕೇರಿ ನಗರಸಭೆಯ ಮಧ್ಯಭಾಗದಲ್ಲಿ ಹಾದುಹೋಗುವ ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿಮೀ ನಿಂದ ಸರಪಳಿ 100.00 ಕಿಮೀ ವರೆಗಿನ 4.80 ಕಿಮೀ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ 27 ರಿಂದ ಹೊರತುಪಡಿಸಿ, ಮಡಿಕೇರಿ ನಗರಸಭೆಗೆ ವರ್ಗಾಯಿಸಲಾಗಿದೆ.

ರಾಜ್ಯ ಹೆದ್ದಾರಿ-27ರ ಸರಪಳಿ 95.20 ಕಿಮೀ ಹಾಗೂ ರಾಜ್ಯ ಹೆದ್ದಾರಿ-88ರ ಸರಪಳಿ 117.10 ಕಿಮೀನ್ನು ಸಂಪರ್ಕಿಸುವ ಹಾಲಿ 365 ಮೀಟರ್ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ-27 ಎಂದು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್.948 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ನಕಲಿ ಉಬ್ಬಚ್ಚು ಕಾಗದಗಳ ಪ್ರಕರಣವನ್ನು ಸಿ.ಓ.ಡಿ. ತನಿಖೆಗೆ ವಹಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ/ 73/ ಮುನೋಮು/ 2002, ದಿನಾಂಕ:05.07.2003 ಮತ್ತು 06.10.2003.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ/429/ಮುನೋಮು/ 2002 ದಿನಾಂಕ: 09.10.2003.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಅಪರಾಧ/147/ಚಿನ/03 ದಿನಾಂಕ: 27.04.2004.
4. ಸರ್ಕಾರಿ ಆದೇಶ ಸಂಖ್ಯೆ: ಒಇ 138 ಪಿಸಿಆರ್ 2003, ದಿನಾಂಕ: 07.11.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 05.07.2003, 06.10.2003 ಮತ್ತು 09.10.2003ರ ಅನಧಿಕೃತ ಟಿಪ್ಪಣಿಗಳಲ್ಲಿ ಪಂಜಾಬ್ ನ್ಯಾಷನಲ್ ಬ್ಯಾಂಕ್, ಮೈಸೂರು ಇವರು ದಿನಾಂಕ: 28.02.2002ರಂದು ಅರ್ಜಿ ಸಲ್ಲಿಸಿ ಒಟ್ಟು ರೂ.9,850/-ಗಳ ಮುದ್ರಾಂಕ ಉಬ್ಬಚ್ಚು ಪತ್ರಗಳ ಮೌಲ್ಯ ಮರುಪಾವತಿ ಮಾಡಬೇಕೆಂದು ಮತ್ತು ಮೆ: ಭಾರತ ಕಂಡಕ್ಟರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ರೂ.22,170/- ಗಳ ಉಬ್ಬಚ್ಚು ಕಾಗದ ಪತ್ರಗಳನ್ನು ಮರುಪಾವತಿ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಸದರಿ ಉಬ್ಬಚ್ಚುಗಳು ನಕಲಿಯಾಗಿದ್ದು ಇವುಗಳನ್ನು ಖಜಾನೆ ಉಪ ನಿರ್ದೇಶಕರಿಂದಾಗಲೀ ಅಥವಾ ಮುದ್ರಾಂಕ ಭಂಡಾರ ಕಾರ್ಯಾಲಯದಿಂದಾಗಲೀ ಉಬ್ಬಚ್ಚು ಮಾಡಿಸಿಲ್ಲವೆಂದು ತಿಳಿಸುತ್ತಾ ಇವುಗಳನ್ನು ಹಾಜರುಪಡಿಸಿದವರ ಮೇಲೆ ಕಾನೂನಿನನ್ವಯ ಕ್ರಮ ತೆಗೆದುಕೊಳ್ಳಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಈ ಪ್ರಕರಣಗಳನ್ನು ತನಿಖೆಗಾಗಿ, ಖೋಟಾ ಛಾಪಾ ಕಾಗದ ಪ್ರಕರಣವನ್ನು ತನಿಖೆ ನಡೆಸುತ್ತಿರುವ ಸ್ಟ್ಯಾಂಪಿಟ್ [STAMPIT] ಗೆ ವಹಿಸಬೇಕೆಂದು ಕಂದಾಯ ಇಲಾಖೆಯು ಕೋರಿರುತ್ತದೆ. ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರದ ಆದೇಶ ಸಂಖ್ಯೆ: ಒಇ 138 ಪಿಸಿಆರ್ 2003, ಬೆಂಗಳೂರು, ದಿನಾಂಕ: 07.11.2003ರಂದು ಸ್ಟ್ಯಾಂಪಿಟ್ ತಂಡಕ್ಕೆ ವಹಿಸಿ ಆದೇಶಿಸಲಾಗಿತ್ತು. ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ: 27.04.2004ರ ಪತ್ರದಲ್ಲಿ ಸ್ಟ್ಯಾಂಪಿಟ್ ತನಿಖಾ ತಂಡದ ಕಾರ್ಯವು ದಿನಾಂಕ: 30.04.2004ರಂದು ಕೊನೆಗೊಳ್ಳುವುದರಿಂದ ನಕಲಿ ಉಬ್ಬಚ್ಚು ಪ್ರಕರಣವನ್ನು ತನಿಖೆಗಾಗಿ ಸ್ಟ್ಯಾಂಪಿಟ್‌ಗೆ ವಹಿಸದಿರುವಂತೆ ನೀಡಿರುವ ವರದಿಯನ್ನು ಅನುಸರಿಸಿ ಸದರಿ ಪ್ರಕರಣವನ್ನು ಸ್ಟ್ಯಾಂಪಿಟ್ ತನಿಖೆಗೆ ವಹಿಸಿದ ಆದೇಶವನ್ನು ಮೇಲೆ (4)ರಲ್ಲಿ ಓದಲಾಗಿರುವ ದಿನಾಂಕ: 07.11.2003ರ ಆದೇಶವನ್ನು ಹಿಂಪಡೆಯಲಾಗಿದೆ ಮತ್ತು ಈ ಪ್ರಕರಣವನ್ನು ಸಿ.ಓ.ಡಿ. ತನಿಖೆಗೆ ವಹಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 105 ಸಿಓಡಿ 2004, ಬೆಂಗಳೂರು, ದಿನಾಂಕ: 23ನೇ ಆಗಸ್ಟ್, 2004**

ಪಂಜಾಬ್ ನ್ಯಾಷನಲ್ ಬ್ಯಾಂಕ್, ಮೈಸೂರು ಇವರು ದಿನಾಂಕ: 28.02.2002 ರಂದು ಮರು ಪಾವತಿಗಾಗಿ ಸಲ್ಲಿಸಿರುವ ಮುದ್ರಾಂಕ ಉಬ್ಬಚ್ಚುಗಳು ಮತ್ತು ಭಾರತ ಕಂಡಕ್ಟರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಮರುಪಾವತಿಗಾಗಿ ಸಲ್ಲಿಸಿರುವ ಉಬ್ಬಚ್ಚುಗಳ ನೈಜತೆಯ ಬಗ್ಗೆ ತನಿಖೆ ನಡೆಸಲು, ಖೋಟಾ ಛಾಪಾ ಕಾಗದ ಪ್ರಕರಣವನ್ನು ತನಿಖೆ ನಡೆಸುತ್ತಿರುವ ಸ್ಟ್ಯಾಂಪಿಟ್ [STAMPIT] ತಂಡಕ್ಕೆ ವಹಿಸಿ ಆದೇಶಿಸಲಾಗಿದ್ದ ಆದೇಶವನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಿಂಪಡೆದು ಪ್ರಕರಣವನ್ನು ಸಿ.ಓ.ಡಿ.ಯಿಂದ ತನಿಖೆ ನಡೆಸುವಂತೆ ಆದೇಶಿಸಲಾಗಿದೆ.

ಸದರಿ ಪ್ರಕರಣದ ಬಗ್ಗೆ ತನಿಖೆ ನಡೆಸಿ ಮೂರು ತಿಂಗಳೊಳಗಾಗಿ ತನಿಖಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ತನಿಖೆಗಾಗಿ ಅಗತ್ಯವಾದ ಮಾಹಿತಿ ಹಾಗೂ ದಾಖಲೆಗಳನ್ನು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವಂತೆ ತನಿಖಾ ತಂಡಕ್ಕೆ ಆದೇಶಿಸಲಾಗಿದೆ. ಪೊಲೀಸ್ ಆಯುಕ್ತರು, ಮೈಸೂರು ಮತ್ತು ಬೆಂಗಳೂರು ಹಾಗೂ ಕಂದಾಯ ಇಲಾಖೆ, ತನಿಖಾ ತಂಡಕ್ಕೆ ಪೂರ್ಣ ಸಹಕಾರ ನೀಡುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಕೃಷ್ಣಮೂರ್ತಿ**

ಪಿ.ಆರ್.949 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಅಪರಾಧಗಳು).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಅರುಣ ಇಂಜಿನಿಯರಿಂಗ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಭದ್ರಾ ಎಡದಂಡೆ ಕಾಲುವೆಯ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶ ವಿಸ್ತರಣೆ ಬಗ್ಗೆ-ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94 (3) ದಿನಾಂಕ: 06.09.1994.

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 61 ಎನ್‌ಸಿಇ 2000, ದಿನಾಂಕ: 09.03.2001.
3. ಸರ್ಕಾರಿ ಆದೇಶ ಸಂಖ್ಯೆ: ಡಿಇ 5 ಎನ್‌ಸಿಇ 2003, ದಿನಾಂಕ: 04.04.2003.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ ಭದ್ರಾ/ ಎಲ್.ಬಿ.ಸಿ./ 2004/ 1633, ದಿನಾಂಕ: 05.08.2004.

**ಪ್ರಸ್ತಾವನೆ:**

ಮೆಸರ್ಸ್ ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ ಲಿಮಿಟೆಡ್ ಕಂಪನಿಗೆ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಡದಂಡೆ ಕಾಲುವೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ ಓದಲಾದ (2) ಮತ್ತು (3)ರ ಸರ್ಕಾರಿ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಅನುಕ್ರಮವಾಗಿ ದಿನಾಂಕ: 31.12.2002 ಹಾಗೂ 31.12.2004ರವರೆಗೆ ವಿಸ್ತರಿಸಲಾಗಿತ್ತು.

3. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಪ್ರಸ್ತುತ ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಹೊಸ ಪಿ.ಪಿ.ಎ. ಮಾಡಿಕೊಳ್ಳುವುದಕ್ಕಾಗಿ ಅನುಷ್ಠಾನದ ನಂತರ 36 ತಿಂಗಳು ಕಾಲಾವಕಾಶ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 278 ಎನ್‌ಸಿಇ 2004, ಬೆಂಗಳೂರು, ದಿನಾಂಕ: 18ನೇ ಆಗಸ್ಟ್, 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೆಸರ್ಸ್ ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾ ಎಡದಂಡೆ ಕಾಲುವೆಯಲ್ಲಿ ಮೇಲೆ (1)ರ ಆದೇಶದಲ್ಲಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು, ದಿನಾಂಕ: 31.12.2003 ರವರೆಗೆ ವಿಸ್ತರಿಸಲಾಗಿದೆ ಹಾಗೂ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಪಿ.ಆರ್.950 ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಪಾವನಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊನ್ನಮ್ಮನಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.1 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಂಇ 107 ಎನ್‌ಸಿಇ 2001 (1), ದಿನಾಂಕ:19.09.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ ಹೊನ್ನಮ್ಮನಹಳ್ಳ/ 2003/226, ದಿನಾಂಕ: 06.02.2004.

**ಪ್ರಸ್ತಾವನೆ:**

ಮೆಸರ್ಸ್ ಪಾವನ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಅತ್ತಿಗುಂಡಿ ಗ್ರಾಮದ ಹೊನ್ನಮ್ಮನಹಳ್ಳಕ್ಕೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಹಂಚಿಕೆಯಾಗಿರುವ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 4.1 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 123 ಎನ್‌ಸಿಇ 2004, ಬೆಂಗಳೂರು, ದಿನಾಂಕ: 24ನೇ ಆಗಸ್ಟ್, 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೆಸರ್ಸ್ ಪಾವನಗಂಗಾ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಅತ್ತಿಗುಂಡಿ ಗ್ರಾಮದ ಹೊನ್ನಮ್ಮನಹಳ್ಳಕ್ಕೆ ಅಡ್ಡಲಾಗಿ ಮೇಲೆ (1)ರ ಆದೇಶದಲ್ಲಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 4.1 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಅನುಮತಿಯನ್ನು ನೀಡಿದೆ. ಹಂಚಿಕೆ ಆದೇಶದ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯಲಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಪಿ.ಆರ್.951 ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಧನಗೆರೆ ಕಿರುಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕಾಗಿ ಮೆಸರ್ಸ್ ಬಾಲಾಜಿ ಪವರ್ ಕಾರ್ಪೊರೇಷನ್ ಕಂಪನಿಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 125 ಎನ್‌ಸಿಇ 96 (11) ದಿನಾಂಕ: 10.06.1997.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 64 ಎನ್‌ಸಿಇ 2001, ದಿನಾಂಕ: 09.03.2001.
3. ಸರ್ಕಾರಿ ಆದೇಶ ಸಂಖ್ಯೆ: ಇಂಇ 289 ಎನ್‌ಸಿಇ 2002, ದಿನಾಂಕ: 13.01.2003.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ ಧನಗೆರೆ/ 2004/ 1260, ದಿನಾಂಕ: 08.07.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಬಾಲಾಜಿ ಪವರ್ ಕಾರ್ಪೊರೇಷನ್ (ಈಗಿನ ಹೆಸರು ಮೆಸರ್ಸ್ ಬಾಲಾಜಿ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್) ಕಂಪನಿಗೆ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಮೇದಿನಿ ಗ್ರಾಮದಲ್ಲಿ 2.25 ಮೆಗಾ ವ್ಯಾಟ್ ಸಾಮರ್ಥ್ಯದ ಧನಗೆರೆ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

2. ಮೇಲೆ (2) ಮತ್ತು (3)ರ ಆದೇಶದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಅನುಕ್ರಮವಾಗಿ 2 ವರ್ಷಗಳ ಅವಧಿಗೆ ಹಾಗೂ ದಿನಾಂಕ: 31.03.2005ರ ತನಕ ವಿಸ್ತರಿಸಲಾಗಿತ್ತು.

3. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸದರಿ ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಪಿ.ಪಿ.ಎ.ಗೆ ಸಹಿ ಹಾಕಿದ ನಂತರ ಯೋಜನೆಯ ಅನುಷ್ಠಾನಕ್ಕಾಗಿ ದಿನಾಂಕ: 31.12.2006ರವರೆಗೆ ಕಾಲಾವಕಾಶ ಬೇಕಾಗಿರುವುದರಿಂದ ದಿನಾಂಕ:31.12.2006ರವರೆಗೆ ಕಾಲಾವಕಾಶ ವಿಸ್ತರಿಸಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 256 ಎನ್‌ಸಿಇ 2004, ಬೆಂಗಳೂರು, ದಿನಾಂಕ: 24ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ, ಸರ್ಕಾರವು ಮೆಸರ್ಸ್ ಬಾಲಾಜಿ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಮೇದಿನಿ ಗ್ರಾಮದ ಧನಗೆರೆ ಎಂಬಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಮೇಲೆ (1)ರ ಆದೇಶದಲ್ಲಿ ಹಂಚಿಕೆ ಮಾಡಲಾದ 2.25 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಹಂಚಿಕೆ ಆದೇಶದ ನಿಬಂಧನೆಗೊಳಪಟ್ಟು ಕಾಲಾವಕಾಶವನ್ನು ದಿನಾಂಕ: 31.12.2006ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.952

## ಕಾನೂನು ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಲಾ 161 ಎಲ್‌ಸಿಇ 2002, ಬೆಂಗಳೂರು, ದಿನಾಂಕ: 19ನೇ ಮೇ, 2004**

ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸಿಇ 2003, ದಿನಾಂಕ: 23.12.2003ರ ಆದೇಶ ಭಾಗದ ಪುಟ-3ರ ಕ್ರಮಸಂಖ್ಯೆ:5ರ ಕಾಲಂ 4 ರಲ್ಲಿ ಬಂಗಾರುಪೇಟೆ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯಕ್ಕೆ 27 ಹುದ್ದೆಗಳು ಎಂದು ನಮೂದಿಸಿದ್ದು, ಈ ಕೆಳಕಂಡಂತೆ ಹುದ್ದೆಗಳ ಪದನಾಮವನ್ನು ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

ಬಂಗಾರುಪೇಟೆ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ:

| | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಸಿವಿಲ್ ಜಡ್ಜ್ (ಕಿರಿಯ ವಿಭಾಗ) | 1 |
| 2. | ಶಿರಸ್ತೇದಾರ | 2 |
| 3. | ಪ್ರಥಮದರ್ಜೆ ಸಹಾಯಕ | 3 |
| 4. | ಶೀಘ್ರಲಿಪಿಗಾರ | 1 |
| 5. | ದ್ವಿತೀಯ ದರ್ಜೆ ಸಹಾಯಕ | 5 |
| 6. | ನಕಲುಗಾರ-ಬೆರಳಚ್ಚುಗಾರ | 1 |
| 7. | ಬೇಲಿಫ್ಸ್ | 2 |
| 8. | ಪ್ರೊಸೆಸ್ ಸರ್ವರ್ಸ್ | 5 |
| 9. | ಅಟೆಂಡರ್ | 1 |
| 10. | ಪ್ಯೂನ್ಸ್ | 4 |
| 11. | ಬೆರಳಚ್ಚುಗಾರ | 2 |
| | **ಒಟ್ಟು** | **27** |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಪರಿಪಾಲನೆ-00-105-ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01-ಸಿಬ್ಬಂದಿವೆಚ್ಚ-125-ಆಧುನೀಕರಣ-ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

ಪಿ.ಆರ್.953

## FINANCE SECRETARIAT

**Sub:** Waiver of CST levied on inter-state sale of Coconuts and copra-reg.

**Ref:** Announcement of the Hon'ble Deputy Chief Minister in his reply to the discussion on Budget 2004-05.

**Preamble:**

The Tumkur District Chamber of Commerce and Industry (R), Tumkur have represented for waiver of CST payable on inter-State sale of coconuts and copra made to dealers in other States who are not registered under the local sales tax law and CST Act in those States and therefore, not covered by 'C' Forms. The Hon'ble Deputy Chief Minister has announced to consider the above request favourably and agreed for waiving the tax that would be levied under the provisions of the CST Act, 1956 in excess of 4% on such transactions.

Hence the following Order.

**Government Order No. FD 168 CSL 2004, Bangalore, Dated: 19th August, 2004**

Sanction is hereby accorded to waive tax levied under the provisions of the Central Sales Tax Act, 1956 in excess of 4% on inter-State sales of coconuts (watery coconuts) and copra by registered dealers in the State to the purchasers in other States subject to production of proof of such inter-States sales before the assessing authorities.

By Order and in the name of the Governor of Karnataka,
**S. DIVAKAR**
Under Secretary to Government,
Finance Department (C.T.-1).

PR-954

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ಪುಟ್ಟಸ್ವಾಮಿ ಕೆ.ಎ.ಎಸ್. (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಹಾಲಿ ಉಪ ಮುಖ್ಯಮಂತ್ರಿಯವರ ಆಪ್ತಕಾರ್ಯದರ್ಶಿ ಇವರಿಗೆ ಅಥವಾ ಉಪ ಮುಖ್ಯಮಂತ್ರಿಯವರ ಕಾರ್ಯಾಲಯದ ಒಬ್ಬ ಗ್ರೂಪ್-ಎ ಅಧಿಕಾರಿಗೆ ಉಪ ಮುಖ್ಯಮಂತ್ರಿಯವರ ಜೊತೆಯಲ್ಲಿ ರಾಜ್ಯದ ಹೊರಗೆ ವಿಮಾನದಲ್ಲಿ ಪ್ರವಾಸ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 63 ಆಸೇವ 2004, ದಿನಾಂಕ: 11.06.2004.
2. ಉಪ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಉಮುಮಂ: ಆಶಾ:ಟಿ 2310/2004, ದಿನಾಂಕ: 02.07.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 11.06.2004ರ ಆದೇಶದಲ್ಲಿ ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್ (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಇವರನ್ನು ಉಪ ಮುಖ್ಯಮಂತ್ರಿಯವರ ಆಪ್ತಕಾರ್ಯದರ್ಶಿ ಹುದ್ದೆಗೆ ನೇಮಿಸಲಾಗಿದೆ.

ಮೇಲೆ ಓದಲಾದ ದಿನಾಂಕ: 02.07.2004ರ ಟಿಪ್ಪಣಿಯಲ್ಲಿ ಉಪ ಮುಖ್ಯಮಂತ್ರಿಯವರು ನವದೆಹಲಿಯಲ್ಲಿ ನಾಗರೀಕ ವಿಮಾನಯಾನ ಮಂತ್ರಾಲಯದಲ್ಲಿ ಬೆಂಗಳೂರು ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ಪ್ರಾಜೆಕ್ಟ್ ಸಂಬಂಧವಾಗಿ ರಿಯಾಯ್ತಿ ಒಪ್ಪಂದಕ್ಕೆ ಸಹಿ ಹಾಕುವ ಕಾರ್ಯಕ್ರಮದಲ್ಲಿ ಭಾಗವಹಿಸಬೇಕಾಗಿದ್ದು ತಮಗೆ ಸಹಕರಿಸಲು ತಮ್ಮ ಜೊತೆಯಲ್ಲಿ ಆಪ್ತಕಾರ್ಯದರ್ಶಿ ಶ್ರೀ ಎಸ್. ಪುಟ್ಟಸ್ವಾಮಿಯವರೂ ಪ್ರಯಾಣಿಸಲು ಸೂಕ್ತ ಆದೇಶವನ್ನು ಹೊರಡಿಸಲು ಸೂಚಿಸಿರುತ್ತಾರೆ.

ಉಪ ಮುಖ್ಯಮಂತ್ರಿಯವರು ಅಧಿಕೃತ ಕಾರ್ಯಕ್ರಮಗಳ ನಿಮಿತ್ತ ರಾಜ್ಯದ ಹೊರಗೆ ಪ್ರವಾಸ ಕೈಗೊಂಡಾಗ ಅವರಿಗೆ ಸಹಕರಿಸುವ ಸಲುವಾಗಿ ಅವರೊಂದಿಗೆ ಆಪ್ತಕಾರ್ಯದರ್ಶಿ ಅಥವಾ ಒಬ್ಬ ಗ್ರೂಪ್-ಎ ಅಧಿಕಾರಿ ವಿಮಾನದಲ್ಲಿ ಪ್ರಯಾಣಿಸಲು ಅನುಮತಿ ನೀಡುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 260 ಆಸೇಇ 2004 (II), ಬೆಂಗಳೂರು, ದಿನಾಂಕ: 25ನೇ ಆಗಸ್ಟ್, 2004**

ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್. (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಹಾಲಿ ಉಪ ಮುಖ್ಯಮಂತ್ರಿಯವರ ಆಪ್ತಕಾರ್ಯದರ್ಶಿ ಇವರು ಅಥವಾ ವಿಮಾನಯಾನ ಮಾಡಲು ಅರ್ಹರಿರುವ ಉಪ ಮುಖ್ಯಮಂತ್ರಿಯವರ ಕಾರ್ಯಾಲಯದ ಒಬ್ಬ ಗ್ರೂಪ್-ಎ ಅಧಿಕಾರಿ ಉಪ ಮುಖ್ಯಮಂತ್ರಿಯವರ ಅಧಿಕೃತ ಪ್ರವಾಸ ಕಾರ್ಯಕ್ರಮದಲ್ಲಿ ಅವರ ಆದೇಶದ ಮೇರೆಗೆ ಉಪ ಮುಖ್ಯಮಂತ್ರಿಯವರ ಜೊತೆಯಲ್ಲಿ ರಾಜ್ಯದ ಹೊರಗೆ ವಿಮಾನದಲ್ಲಿ ಪ್ರವಾಸ ಮಾಡಲು ತಕ್ಷಣದಿಂದ ಜಾರಿಗೆ ಬರುವಂತೆ ಉಪ

ಮುಖ್ಯಮಂತ್ರಿಯವರ ಅಧಿಕಾರಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ದಿನಾಂಕ: 10.08.2004ರ ಅ.ಟಿ. ಸಂಖ್ಯೆ: ಆಇ 1253 ವೆಚ್ಚ-5:2004ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್.955

## ಇಂಧನ ಸಚಿವಾಲಯ

**ವಿಷಯ:** ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ) ಇವರ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 187 ಇಇಬಿ 2003, ದಿನಾಂಕ:23.01.2004.
2. ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ (2) ಸಿಆರ್ 78 02-03, ದಿನಾಂಕ: 01.08.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರ ನಿಯೋಜನಾ ಅವಧಿಯನ್ನು ದಿನಾಂಕ: 17.06.2003ರಿಂದ 16.06.2004ರವರೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಒಂದು ವರ್ಷ ಅವಧಿಗೆ ಮುಂದುವರಿಸಲು ಅನುಮತಿ ನೀಡಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಮೈಸೂರು ಇವರು ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿದ್ಯುತ್) ಇವರ ನಿಯೋಜನಾ ಸೇವೆಯನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲೇ ಎರಡು ವರ್ಷಗಳಿಗೆ ಮುಂದುವರಿಸಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 187 ಇಇಬಿ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್, 2004**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ಮಹೇಶ್‌ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರ ನಿಯೋಜನಾ ಅವಧಿಯನ್ನು ಎರಡು ವರ್ಷಗಳ ಅವಧಿಗೆ ದಿನಾಂಕ: 17.06.2004 ರಿಂದ 16.06.2008ರವರೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿಯೇ ಮುಂದುವರಿಸಲು ಸರ್ಕಾರವು ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.956

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 8 ಪೊಸಿಅ 2003, ಬೆಂಗಳೂರು, ದಿನಾಂಕ: 18ನೇ ಆಗಸ್ಟ್, 2004**

**ವಿಷಯ:** ಶ್ರೀ ಬಿ.ಟಿ. ಚಂದ್ರಪ್ಪ, ಮಾಜಿ ಪಿಸಿ 102, ಕೆ.ಎಸ್ಆರ್‌ಪಿ 3ನೇ ಪಡೆ ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 126 ಪೊಸಿಅ 90 ದಿನಾಂಕ: 14.05.91ರಲ್ಲಿನ ಆದೇಶದ ಭಾಗದಲ್ಲಿ "ಶಿಸ್ತು ಪ್ರಾಧಿಕಾರಿಗಳ ಆದೇಶ ಹಾಗೂ ಆ ಆದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ನೇಮಕ ಮಾಡಿಕೊಂಡು ಅವರ ವೇತನವನ್ನು ಶಿಸ್ತಿನ ಅಧಿಕಾರಿಗಳ ಆದೇಶದ ದಿನಾಂಕದಿಂದ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ನಿಗದಿಪಡಿಸುವಂತೆ ಎಂಬುದರ" ಬದಲಾಗಿ "ಅವರ ವೇತನವನ್ನು ಶಿಸ್ತಿನ ಅಧಿಕಾರಿಗಳ ಆದೇಶದ ದಿನಾಂಕದಿಂದ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಮೂರು (3) ವರ್ಷಗಳವರೆಗೆ ಸಂಚಿತಪರಿಣಾಮ ಸಹಿತವಾಗಿ (with cumulative effect) ಇಳಿಸಲಾಗಿದೆ ಮತ್ತು ಸದರಿ 3 ವರ್ಷಗಳ ದಂಡನಾವಧಿಯ ನಂತರ ಇವರ ವೇತನವನ್ನು ಇವರಿಗೆ ಶಿಸ್ತು ಪ್ರಾಧಿಕಾರಿಗಳು ದಂಡನೆಯನ್ನು ಜಾರಿ ಮಾಡಿದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನದ ಹಂತದಲ್ಲಿ ನಿಗದಿಪಡಿಸಲಾಗಿದೆ" ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ದಿನಾಂಕ: 14.05.91ರ ಆದೇಶದ ಇತರ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್.962